# ನಮ್ಮ ಕುವೆಂಪು

ನಾಡೋಜ ಡಾ. ಜಿ. ಕೃಷ್ಣಪ್ಪ



ಕನ್ನಡ ಜನಶಕ್ತಿ ಕೇಂದ್ರ, ಬೆಂಗಳೂರು



**NAMMA KUVEMPU**

By Dr. G. KRISHNAPPA, # 22, Sri Gurudatta Nilaya, 1st Cross, Netaji Nagara, Mattikere, Bengaluru - 560 054, Mobile : 99721 09209

| | | |
|---|---|---|
| First Edition | : | 2024 |
| Copyright | : | Dr. G. Krishnappa |
| Pages | : | XX+108 = 128 |
| Price | : | Rs. 50/- |
| Size | : | Demmy 1/8th |
| Paper | : | 70 GSM N.S. Maplitho |
| Copies | : | 1,000 |
| Publisher | : | President<br>Kannada Janashakthi Kendra, Bangalore. |

**ನಮ್ಮ ಕುವೆಂಪು**

ಲೇಖಕರು: ಡಾ ॥ ಜಿ. ಕೃಷ್ಣಪ್ಪ, #22, ಶ್ರೀ ಗುರುದತ್ತ ನಿಲಯ, ಮೊದಲನೇ ಅಡ್ಡರಸ್ತೆ, ನೇತಾಜಿನಗರ, ಮತ್ತಿಕೆರೆ, ಬೆಂಗಳೂರು – 560 054, ಜಂಗಮವಾಣಿ : 99721 09209

ಮೊದಲ ಮುದ್ರಣ : 2024

| | | |
|---|---|---|
| ಕೃತಿಸ್ವಾಮ್ಯ | : | ಡಾ॥ ಜಿ. ಕೃಷ್ಣಪ್ಪ |
| ಪುಟಗಳು | : | XX+108 = 128 |
| ಬೆಲೆ | : | ರೂ. 50/– |
| ಪ್ರತಿಗಳು | : | 1.000 |
| ಅಳತೆ | : | ಡೆಮ್ಮಿ 1/8 |
| ಕಾಗದ | : | 70 ಜಿಎಸ್ಎಂ ಎನ್.ಎಸ್. ಮ್ಯಾಪ್ಲಿಥೋ |
| ಪ್ರಕಾಶಕರು | : | ಅಧ್ಯಕ್ಷರು<br>ಕನ್ನಡ ಜನಶಕ್ತಿ ಕೇಂದ್ರ, ಬೆಂಗಳೂರು. |
| ಮುದ್ರಣ | : | **ಕರ್ನಾಟಕ ಆಫ್‌ಸೆಟ್ ಪ್ರಿಂಟರ್ಸ್**<br>ಚಾಮರಾಜಪೇಟೆ, ಬೆಂಗಳೂರು – 560 018.<br>ಮೊಬೈಲ್ : 98450 91336 / 78925 36149 |

# ಡಾ. ಜಿ. ಕೃಷ್ಣಪ್ಪ

ಬೇಂದ್ರೆ ಕೃಷ್ಣಪ್ಪ ಎಂದೇ ಜನಪ್ರಿಯರಾಗಿರುವ ಡಾ. ಜಿ. ಕೃಷ್ಣಪ್ಪ (1948) ಅವರು ಸೃಜನಶೀಲ ಲೇಖಕರು, ಬೇಂದ್ರೆ ಸಾಹಿತ್ಯ ಪರಿಚಾರಕರು. ಬೇಂದ್ರೆ ಕಾವ್ಯದ ಓದಿಗೆ ಹೊಸ ಆಯಾಮ ಕೊಟ್ಟವರು. ಬೆಂಗಳೂರು ಕೃಷ್ಣಪ್ಪನವರ ಹುಟ್ಟೂರು. ಆಟೋಮೊಬೈಲ್ ಇಂಜಿನಿಯರ್, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಯಾಗಿ ನಿವೃತ್ತಿ. ಉದ್ಯೋಗದ ನಡುವೆ ಬಿ.ಎ, ಎಲ್.ಎಲ್.ಬಿ., ಕನ್ನಡದಲ್ಲಿ ಸ್ನಾತಕೋತ್ತರ ಪದವಿ, 'ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ : ಒಂದು ಅಧ್ಯಯನ' ಕುರಿತು ಪಿಎಚ್.ಡಿ. ಸತತ ಮೂರು ದಶಕಗಳಿಂದ ಶಾಲಾ-ಕಾಲೇಜುಗಳಲ್ಲಿ 650ಕ್ಕೂ ಅಧಿಕ ಬೇಂದ್ರೆ ಕಾವ್ಯಗಾಯನ ಸ್ಪರ್ಧೆ ಆಯೋಜನೆ, ಬಹುಮಾನವಾಗಿ ಬೇಂದ್ರೆ ಕೃತಿಗಳ ನೀಡಿಕೆ. ನಾಡಿನಾದ್ಯಂತ ಸಂಚಾರ, ಬೇಂದ್ರೆ ಕಾವ್ಯಾನುಭವವನ್ನು ಅಕ್ಷರಕ್ಕೆ ಅಕ್ಷರಶಃ ಇಳಿಸಿದ ಭಗೀರಥರು. ಬೇಂದ್ರೆ ಕಾವ್ಯ ಕೂಟ ಸ್ಥಾಪನೆ. ಸ್ನಾತಕೋತ್ತರ ಹಾಗೂ ಪಿಎಚ್.ಡಿ., ವಿದ್ಯಾರ್ಥಿಗಳಿಗೆ ಕಾವ್ಯವಿಮರ್ಶಾಸ್ಪರ್ಧೆ ಆಯೋಜಿಸಿ ಬಹುಮಾನ ವಿತರಣೆ. 'ನಾಕುತಂತಿ-ಒಂದು ಟಿಪ್ಪಣಿ', 'ಹೂತ್ಕದ ಹುಣಸಿ', 'ಹಸಿರು ಹಚ್ಚಿ ಚುಚ್ಚಿ', 'ಬೇಂದ್ರೆ ಕಾವ್ಯ: ಪದನಿರುಕ್ತ' ಮುಂತಾದ ಹನ್ನೆರಡು ಬೇಂದ್ರೆ ಕಾವ್ಯವಿಮರ್ಶಾ ಕೃತಿಗಳ ರಚನೆ.

ಸರಳ ಕನ್ನಡದಲ್ಲಿ 'ಲಕ್ಷ್ಮೀಶನ ವಚನ ಜೈಮಿನಿ ಭಾರತ', ಹರಿಹರನ 'ವಚನ ಗಿರಿಜಾ ಕಲ್ಯಾಣ', ರಾಘವಾಂಕನ 'ವಚನ ಹರಿಶ್ಚಂದ್ರ ಚಾರಿತ್ರ' ಹಾಗೂ ಕನಕದಾಸರ 'ನಳದಮಯಂತಿ ಪ್ರೇಮಕಥೆ'ಯ ರಚನೆ.



ಕೃಷ್ಣಪ್ಪನವರು 'ಬೇಂದ್ರೆ ವ್ರತ'ದಿಂದ 'ಕುವೆಂಪು ಧ್ಯಾನ'ಕ್ಕೆ ಹೊರಳಿ 'ಶ್ರೀ ರಾಮಾಯಣ ದರ್ಶನಂ ವಚನ ದೀಪಿಕೆ', 'ಕುವೆಂಪು ಹನುಮದ್ದರ್ಶನ', 'ಶ್ರೀ ರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ' 'ಕರ್ಣಚೈತ್ರನ ಪರ್ಣಶಾಲೆ', 'ಚಿತ್ರಾಂಗದಾ' ಕೃತಿಗಳನ್ನು ಸಹೃದಯರಿಗೆ ನೀಡಿದ್ದಾರೆ. ಸತತ ಸಾಹಿತ್ಯ ಸೇವೆಗೆ ಡಾ. ಜಿ. ಪಿ. ರಾಜರತ್ನಂ ಕನ್ನಡ ಸಾಹಿತ್ಯ ಪರಿಚಾರಕ ಪ್ರಶಸ್ತಿ, ಅಂಬಿಕಾತನಯದತ್ತ ರಾಷ್ಟ್ರೀಯ ಪ್ರಶಸ್ತಿ, ಕೆಂಪೇಗೌಡ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸಾಹಿತ್ಯ ಶ್ರೀ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ 2022ರಲ್ಲಿ ನಾಡೋಜ ಪದವಿ ಗೌರವಗಳಿಗೆ ಪಾತ್ರರಾಗಿದ್ದಾರೆ. ಡಾ. ವೇಮಗಲ್ ನಾರಾಯಣಸ್ವಾಮಿ ಪ್ರತಿಷ್ಠಾನ 2023 ರಲ್ಲಿ 'ಸಂಸ್ಕೃತಿ ಸಿರಿ' ಪ್ರಶಸ್ತಿ ನೀಡಿದೆ.






# ಅರ್ಪಣೆ

ಬೆಂಗಳೂರಿನ ಸ್ವಾತಂತ್ರ್ಯ ಉದ್ಯಾನದ ಮುಂಭಾಗದಲ್ಲಿ ಕೊಡುಗೈದಾನಿಯಾಗಿ ಒಂಬತ್ತು ಅಡಿ ಎತ್ತರದ ಕುವೆಂಪು ಕಂಚಿನ ಪ್ರತಿಮೆಯನ್ನು ರಾಜಧಾನಿಯಲ್ಲಿ ಪ್ರಪ್ರಥಮವಾಗಿ ಸ್ಥಾಪಿಸಿದ ನಾಡಿನ ಶ್ರೇಷ್ಠ ಶಿಕ್ಷಣ ತಜ್ಞ, ಕುವೆಂಪು ಅಭಿಮಾನಿ **ಡಾ. ಎಂ. ಆರ್. ದೊರೆಸ್ವಾಮಿ** ಅವರಿಗೆ.

# ಮುನ್ನುಡಿ

ಬೇಂದ್ರೆ ವ್ರತದಲ್ಲಿ ಸುಮಾರು 25 ವರ್ಷಗಳವರೆಗೆ ತೊಡಗಿಕೊಂಡಿದ್ದ ಜಿ.ಕೃಷ್ಣಪ್ಪನವರು ಸ್ವಲ್ಪ ತಡವಾಗಿಯೇ ಕುವೆಂಪು ಜೀವನ ಮತ್ತು ಸಾಹಿತ್ಯದತ್ತ ಹೊರಳಿದರು. ಅದಕ್ಕೆ ಕಾರಣ ಕುವೆಂಪು ಸಾಹಿತ್ಯ ಕುರಿತು ಆವರೆಗೆ ಪ್ರಕಟವಾಗಿದ್ದ ಪುಸ್ತಕಗಳಲ್ಲಿ ಬಹುಪಾಲು ನಾನೂ ಕುವೆಂಪು ಸಾಹಿತ್ಯ ಕುರಿತು ಪುಸ್ತಕ ಬರೆದಿದ್ದೇನೆ ಎಂದು ತೋರಿಸಿಕೊಳ್ಳುವ ಮಟ್ಟದವು ಮತ್ತು ಕುವೆಂಪು ಸಾಹಿತ್ಯಾಧ್ಯಯನಕ್ಕೆ ಅಗತ್ಯವಾದ ಪೂರ್ವ ಸಿದ್ಧತೆಯಾಗಲೀ ಮನಸ್ಥಿತಿಯಾಗಲೀ ಸಂಯಮವಾಗಲೀ ಇಲ್ಲದಿದ್ದುದು; ಕುವೆಂಪು ತಮ್ಮ ಬರಹಗಳಲ್ಲಿ ಪ್ರಯೋಗಿಸಿದ್ದ ಶಬ್ದಗಳ ತಲೆಬುಡವೂ ಅರ್ಥವಾಗದೆ, ಅರ್ಥಮಾಡಿಕೊಳ್ಳುವ ಪ್ರಯತ್ನವನ್ನೂ ಮಾಡದೆ ತಮಗೆ ತೋಚಿದಂತೆ ಅರ್ಥ ಮಾಡಿಕೊಂಡು ವಿವರಣೆ ಕೊಡುತ್ತಿದ್ದುದು. ಈ ಅತೃಪ್ತಿಯೇ ಕೃಷ್ಣಪ್ಪನವರನ್ನು ಕುವೆಂಪು ಸಾಹಿತ್ಯದ ಮರುಓದಿಗೆ ಪ್ರೇರೇಪಿಸಿ ಅದನ್ನು ಸಮರ್ಪಕವಾದ ರೀತಿಯಲ್ಲಿ ಮಂಡಿಸಲು ಕಾರಣವಾಯಿತು. ಹನ್ನೆರೆಡು ಕೃತಿಗಳನ್ನು 25 ವರ್ಷಗಳ ಅವಧಿಯಲ್ಲಿ ಪ್ರಕಟಿಸಿ ಬೇಂದ್ರೆಯವರಿಗೆ ನ್ಯಾಯ ಸಲ್ಲಿಸಿದ್ದ ಕೃಷ್ಣಪ್ಪನವರು ಕುವೆಂಪು ಅವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯವನ್ನು ಆಳವಾಗಿ ಮತ್ತು ಸಂಶೋಧನೆಯ ದೃಷ್ಟಿಯಿಂದ ಅಧ್ಯಯನ ಮಾಡಿ ಆಗ ಹೊಳೆದ ಹಲವು ಹೊಸ ವಿಚಾರಗಳನ್ನು ಪತ್ರಿಕೆಗಳಲ್ಲಿ ನಿಯತಕಾಲಿಕೆಗಳಲ್ಲಿ ಬರೆದು ಅವುಗಳನ್ನು ಸಹೃದಯರು ಮೆಚ್ಚಿಕೊಂಡದ್ದರಿಂದ ಉತ್ತೇಜಿತರಾಗಿ ಮೊದಲಿಗೆ "ಕುವೆಂಪು ಹನುಮದ್ದರ್ಶನ"ವನ್ನು 2020ರಲ್ಲಿ ಪ್ರಕಟಿಸಿದರು. ಇದು ಮುಂದೆ 'ಶ್ರೀರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ', 'ಕುವೆಂಪು ಶ್ರೀರಾಮಾಯಣ ದರ್ಶನಂ ವಚನ ದೀಪಿಕೆ', ರಾಮಾಯಣ ದರ್ಶನ ಮಹಾಕಾವ್ಯದ ವಿಮರ್ಶೆಯಾದ 'ಕರ್ಣಚೈತ್ರನ ಪರ್ಣಶಾಲೆ', 'ಕುವೆಂಪು ಚಿತ್ರಾಂಗದಾ' ಎನ್ನುವ 5 ಕೃತಿಗಳು ನಾಲ್ಕು ವರ್ಷಗಳ ಅವಧಿಯಲ್ಲಿ ಪ್ರಕಟವಾದವು. ಕುವೆಂಪು ಅವರಿಗೆ



ಶ್ರೀರಾಮಾಯಣದರ್ಶನಂ ಕಾವ್ಯವನ್ನು ಒಂಬತ್ತು ವರ್ಷಗಳಲ್ಲಿ ಅಧ್ಯಯನ ಮಾಡಿ ಸಾಮಾನ್ಯ ಓದುಗರಿಗೂ ವಿದ್ವಾಂಸರಿಗೂ ಪ್ರಿಯವಾಗುವಂತೆ ವಿಶ್ಲೇಷಣೆ ಮಾಡುವುದು, ಮೂಲ ಭಾವಗಳನ್ನು ಗ್ರಹಿಸಲು ಸುಲಭವಾಗುವಂತೆ ಬರೆಯುವುದು ಸುಲಭವಾದ ಕೆಲಸವಾಗಿರಲಿಲ್ಲ. ಅಂಥ ಅಸಾಧಾರಣ ಕೆಲಸದಲ್ಲಿ ಕೃಷ್ಣಪ್ಪನವರು ಪಡೆದ ಯಶಸ್ಸೇ ಪ್ರಜಾವಾಣಿ ಪತ್ರಿಕೆಯ ಭಾನುವಾರದ ಪುರವಣಿಯಲ್ಲಿ ಕುವೆಂಪು ಪದ ಸೃಷ್ಟಿಯ ಬಗೆಗೆ ಸರಳ, ಸೂಕ್ತ ವಿವರಣೆ ಬರೆಯುವಂತೆ ಮಾಡಿದೆ.

ಕುವೆಂಪು ಮಹಾಕಾವ್ಯ ಸೃಷ್ಟಿಯಲ್ಲಿ ತೀವ್ರವಾದ ಆಸಕ್ತಿಯಿಂದ ತೊಡಗಿಸಿಕೊಂಡರು. ಮಹಾಕಾದಂಬರಿಗಳನ್ನು ಬರೆದರೂ ಮಕ್ಕಳ ಸಾಹಿತ್ಯವನ್ನು ಕಡೆಗಣಿಸದೆ ಅಲ್ಲೂ ಅತ್ಯುತ್ತಮ ಕೊಡುಗೆಗಳನ್ನು ನೀಡಿದರು. ಕೃಷ್ಣಪ್ಪನವರು ಕೂಡ ಕುವೆಂಪು ಸಾಹಿತ್ಯ ಕುರಿತಂತೆ ತಾರುಣ್ಯಾವಸ್ಥೆ ದಾಟಿದ ಓದುಗರಿಗಾಗಿ ಈಗಾಗಲೆ ಐದು ಪುಸ್ತಕಗಳನ್ನು ಹೊರತಂದಿದ್ದರೂ, ಇನ್ನಷ್ಟು ಬರೆಯುವ ಸರಕು ಅವರಲ್ಲಿದ್ದರೂ ಕುವೆಂಪು ಅವರ ಜೀವನ ಮತ್ತು ಸಾಧನೆಯನ್ನು ಮಕ್ಕಳಿಗೆ ಪರಿಚಯ ಮಾಡಿಕೊಡುವುದೂ ಅಷ್ಟೇ ಮುಖ್ಯ ಎಂದು ಭಾವಿಸಿದ ಪರಿಣಾಮವಾಗಿ ನೂರು ಪುಟಗಳ ಮಿತಿಯ ಕಿರುಪುಸ್ತಕವೊಂದು 'ನಮ್ಮ ಕುವೆಂಪು' ಹೆಸರಿನಲ್ಲಿ ಪ್ರಕಟವಾಗುತ್ತಿದೆ. ಮಕ್ಕಳಿಗೆ ಕುವೆಂಪು ಅವರನ್ನು ಪರಿಚಯಿಸುವಾಗ ಹೆಸರಿಗೂ ಮುನ್ನ 'ನಮ್ಮ' ಎಂದು ಗುರುತಿಸಿರುವುದರಲ್ಲಿಯೇ ಒಂದು ಆಪ್ತತೆಯಿದೆ. ಬೇರೆ ಯಾರೋ ಅಲ್ಲ, ದೂದವರಲ್ಲ. ಕಂಡವರು, ಕೇಳಿದವರು, ಬಂಧುಗಳು, ಆತ್ಮೀಯರು, ಹಿತೈಷಿಗಳು ಇತ್ಯಾದಿಯಾಗಿ ನಾನಾರ್ಥಗಳು ಅದರಲ್ಲಿ ತುಂಬಿಕೊಂಡಿದ್ದ ಸಂತೋಷ ಕುತೂಹಲ ಆಸಕ್ತಿಯಿಂದ ಮಕ್ಕಳು ಪುಸ್ತಕದ ಪುಟಗಳನ್ನು ತಿರುವಿ ಹಾಕುವಂತೆ ಮಾಡುವ ಒಂದು ಆಕರ್ಷಣೆಯಂತೂ ಆ ಹೆಸರಿನಲ್ಲಿದೆ. ಕುವೆಂಪು ಅವರ ಬಾಲ್ಯದಿಂದಾರಂಭಿಸಿ ಶಾಲೆ ಕಾಲೇಜುಗಳಲ್ಲಿನ ವಿದ್ಯಾರ್ಥಿ ಜೀವನ, ವಿದ್ಯಾಭ್ಯಾಸ ಮುಗಿದ ನಂತರ

ಅಧ್ಯಾಪಕರಾಗಿ ವೃತ್ತಿಯಲ್ಲಿ ಏರಿದ ಎತ್ತರ, ಆ ಸಂದರ್ಭದಲ್ಲಿ ನಡೆದ ಮಹತ್ವದ ಘಟನೆಗಳು, ಸಾಂಸಾರಿಕ ಜೀವನ, ಮಕ್ಕಳ ಒಡನಾಟ ಇವೆಲ್ಲ ಅನುಕ್ರಮವಾಗಿ ಸುರುಳಿ ಬಿಚ್ಚುತ್ತ, ಜ್ಞಾನಪೀಠದಂಥ ಉನ್ನತ ಪ್ರಶಸ್ತಿಯಿಂದ ಗೌರವಿಸಲ್ಪಡುವುದರೊಂದಿಗೆ ಮುಕ್ತಾಯವಾಗುತ್ತದೆ. 'ನಮ್ಮ ಕುವೆಂಪು' ಕೃತಿಯಲ್ಲಿ ನಿರೂಪಕವಾಗಿರುವ ಸಂಗತಿಗಳು ಮಕ್ಕಳನ್ನು ದೃಷ್ಟಿಯಲ್ಲಿರಿಸಿಕೊಂಡವಾದರೂ ಕುವೆಂಪುವನ್ನು ಸಮಗ್ರವಾಗಿ ಓದಲಾಗದ ದೊಡ್ಡವರಿಗೂ ಅವರ ಜೀವನಪಥ ಮತ್ತು ಸಾಧನಾ ಪಥವನ್ನು ಸಂಗ್ರಹವಾಗಿ ಸ್ವಾರಸ್ಯಪೂರ್ಣವಾಗಿ ಪರಿಚಯಿಸಿ ಇನ್ನೂ ಹೆಚ್ಚು ತಿಳಿಯಬೇಕು ಎಂದು ಆಸಕ್ತಿಯನ್ನು ಮೂಡಿಸುವಂತೆ, ಕಿರಿದರಲ್ಲೇ ಹಿರಿದಾದುದನ್ನು ಕಟ್ಟಿಕೊಡುವಂತೆ, ಕುವೆಂಪು ಕುರಿತಂತೆ ಇರುವ ಕೆಲವು ತಪ್ಪು ತಿಳಿವಳಿಕೆಗಳನ್ನು ಹೋಗಲಾಡಿಸುವಂತೆ ಇವೆ. ಕುವೆಂಪು ಅವರನ್ನೂ ಅವರ ಸಾಹಿತ್ಯ ಮತ್ತು ಸಂದೇಶಗಳನ್ನೂ ಯಾರು ಪ್ರೀತಿಯಿಂದ ಓದುತ್ತಾರೋ ಚೆನ್ನಾಗಿ ಅರ್ಥಮಾಡಿಕೊಂಡಿರುತ್ತಾರೋ ಅಂಥವರಲ್ಲಿ ಸಾಮಾನ್ಯವಾಗಿ ಮೂಡುವ ಒಂದು ಅಭಿಪ್ರಾಯ ಎಂದರೆ – ಎಪ್ಪತ್ತು ಎಂಬತ್ತು ವರ್ಷಗಳ ಹಿಂದೆಯೇ ರಚಿಸಿದ್ದ ಸಾಹಿತ್ಯ ಕೃತಿಗಳಲ್ಲಿ ಐವತ್ತು ವರ್ಷಗಳ ಹಿಂದೆಯೇ ಮಾಡಿದ್ದ ಭಾಷಣಗಳಲ್ಲಿ ಭೂತವನ್ನು ಅವಲೋಕಿಸಿ ವರ್ತಮಾನದಲ್ಲಿ ನಿಲುಗಡೆಯಾಗದೇ ಇವತ್ತಿಗೂ ಆಶ್ಚರ್ಯಕರವಾಗಿ ಅನ್ವಯವಾಗುವಂಥ ಭವಿಷ್ಯದ್ದರ್ಶಿಯಾದ ಪ್ರವಾದಿಯಂತೆ ವಿಚಾರಗಳನ್ನು ಬಿತ್ತರಿಸಿರುವುದು. ಅದು ಬಹುಮಟ್ಟಿಗೆ ದೇವರು ಧರ್ಮವನ್ನು ಗುತ್ತಿಗೆಗೆ ಪಡೆದುಕೊಂಡವರಂತೆ ಆಡುತ್ತ, ಅವುಗಳ ಹೆಸರಿನಲ್ಲಿ ಮೌಢ್ಯಗಳನ್ನು ಸೃಷ್ಟಿಸಿ ಹೋದಲ್ಲಿ ಬಂದಲ್ಲಿ ಅವುಗಳನ್ನು ಮತ್ತೆ ಮತ್ತೆ ಹೇಳಿ, ಅನಕ್ಷರಸ್ಥ ಅವಿದ್ಯಾವಂತ ಶೂದ್ರರನ್ನು ಚೆನ್ನಾಗಿ ನಂಬಿಸಿ, ಅವರು ಸದಾ ಭಯದ ನೆರಳಿನಲ್ಲೇ ಬದುಕುವಂತೆ ಮಾಡಿ, ಅವರ ಸಂಪಾದನೆಯ ಬಹುಪಾಲನ್ನು ತಾವೇ ಕಬಳಿಸಿ ತಮ್ಮ ಹೊಟ್ಟೆಗಳನ್ನು ಅಕ್ರಮವಾಗಿ ತುಂಬಿಸಿಕೊಳ್ಳುತ್ತ ಸಂಸಾರದೊಂದಿಗೆ ಸುಖಲೋಲುಪ ಜೀವನವನ್ನು ನಡೆಸುತ್ತ, ಶೂದ್ರರು ಅಕ್ಷರವಂತರಾಗಿರುವ



ವಿದ್ಯಾವಂತರಾಗಿರುವ ಪ್ರಸ್ತುತ ಸಂದರ್ಭದಲ್ಲೂ ನಾನಾ ರೀತಿಯ ತಂತ್ರ ದುರ್ಮಂತ್ರಗಳಿಂದ ಅವರನ್ನು ಶೋಷಣೆ ಮಾಡುತ್ತಲೇ ಇರುವ ಪುರೋಹಿತಶಾಹಿ ವರ್ಗವನ್ನು, ಅವರ ಕಾರ್ಯಾಚರಣೆಯ ಕುಟಿಲ ವಿಧಾನಗಳನ್ನು ಕುವೆಂಪು ಬಯಲಿಗೆಳೆದಿದ್ದಾರೆ. ಇಂಥ ಸೂಕ್ಷ್ಮ ಸಂಗತಿಗಳನ್ನು ಸೂಕ್ತ ನಿದರ್ಶನಗಳೊಂದಿಗೆ ಪರಿಚಯ ಮಾಡಿಕೊಡುವ ಕುವೆಂಪು ಸಾಹಿತ್ಯದ ರುಚಿಯನ್ನು ಮಕ್ಕಳಿಗೆ ಚಿಕ್ಕಂದಿನಲ್ಲೇ ಪರಿಚಯಿಸುತ್ತಾ ಹೋದರೆ ಅಂಥ ಮಕ್ಕಳು ಮುಂದೆ ಸಾತ್ವಿಕ ವ್ಯಕ್ತಿತ್ವವನ್ನು ರೂಪಿಸಿಕೊಂಡು ಉತ್ತಮವಾದ ಬದುಕು ಮತ್ತು ಭವಿಷ್ಯವನ್ನು ನಿರ್ಮಾಣ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಕುವೆಂಪು ಓದಿಕೊಂಡವರು, ಮನನ ಮಾಡಿಕೊಂಡವರು ಎಂದೂ ಸಮಾಜ ಘಾತುಕರಾಗಲು, ದುಷ್ಟರಾಗಲು, ಭ್ರಷ್ಟರಾಗಲು ಸಾಧ್ಯವಿಲ್ಲ. ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ, ಸಾಮರಸ್ಯ, ಸಹಬಾಳ್ವೆ, ಸ್ವಾಯತ್ತ, ತಾರತಮ್ಯರಹಿತ, ಸರ್ವೋದಯ ಸಮಾಜವನ್ನು ನಿರ್ಮಾಣ ಮಾಡುವುದರಲ್ಲಿ ಆಸಕ್ತರಾಗುತ್ತಾರೆ ಮತ್ತು ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಕೃಷ್ಣಪ್ಪನವರು ಇಂಥ ಮಹದಾಶಯ ಇರಿಸಿಕೊಂಡೇ ಕುವೆಂಪು ಅವರ ಜೀವನದ ಮಹತ್ವದ ಘಟ್ಟಗಳನ್ನು ಮತ್ತು ಅವರ ಯುಗಧರ್ಮ ಸ್ಪಂದಿಯಾದ ಸಾಹಿತ್ಯದ ಸಾರವನ್ನು ಮಕ್ಕಳಿಗೆ ಪರಿಚಯಿಸುವುದಕ್ಕಾಗಿಯೇ ನಮ್ಮಿಂದಾಗದಿರುವ ಸಾಮಾಜಿಕ ಪರಿವರ್ತನೆ ಅವರಿಂದ ಆಗಲಿ ಎನ್ನುವ ಉದ್ದೇಶದಿಂದಲೇ 'ನಮ್ಮ ಕುವೆಂಪು' ಕೃತಿಯನ್ನು ರಚಿಸಿದ್ದಾರೆ.

ಮಲೆನಾಡಿನ ದಟ್ಟಕಾಡಿನ ನಡುವಿನ ಕುಪ್ಪಳಿ ಎನ್ನುವ ಕುಗ್ರಾಮದಲ್ಲಿ 1910ರ ಆಸುಪಾಸಿನಲ್ಲಿ ಅಸಾಧಾರಣಎನ್ನಿಸುವಂತಹ ಭವಿಷ್ಯತ್ತಿಗೆ ಅಪೂರ್ವ ಮುನ್ನುಡಿ ಬರೆಯಿತೋ ಎಂಬಂತೆ ವೆಂಕಟಪ್ಪನವರು ಕ್ರಿಶ್ಚಿಯನ್ ಪಾದ್ರಿಗಳಿಂದ, ಬ್ರಾಹ್ಮಣ ಐಗಳಿಂದ ಅಕ್ಷರ ಬೀಜದ ಬಿತ್ತನೆ ಮಾಡಿಸಿದ್ದರ ಫಲವಾಗಿ ಕುವೆಂಪು ಆಗ ಪುಟ್ಟಪ್ಪನಾಗಿ ಪ್ರಾರಂಭಿಸಿದ ಯಾನ ಮುಂದೆ ತೀರ್ಥಹಳ್ಳಿಯನ್ನು ಹಾಯ್ದು ಮೈಸೂರನ್ನು ಮುಟ್ಟಿತು. ಪ್ರೌಢಶಾಲೆ, ಕಾಲೇಜು ಮತ್ತು ಸ್ನಾತಕೋತ್ತರ

ಶಿಕ್ಷಣವನ್ನು ಪಡೆಯುವಾಗ ಅವರ ಭವಿಷ್ಯತ್ತಿನ ಭಾಗ್ಯದ ಬಾಗಿಲು ತೆಗೆಯುವಂಥ ಶಿಕ್ಷಕರ, ಅಧ್ಯಾಪಕರ ಬೋಧನೆ ಮತ್ತು ಮಾರ್ಗದರ್ಶನ ಲಭಿಸಿತು. ಮೈಸೂರಿನ ಶ್ರೀರಾಮಕೃಷ್ಣಾಶ್ರಮದ ಸಿದ್ದೇಶ್ವರಾನಂದ ಸ್ವಾಮೀಜಿಯವರ ಒಡನಾಟ ಮತ್ತು ಅವರು ತೆಗೆದುಕೊಂಡ ಕಾಳಜಿಯಿಂದಾಗಿ ಕುವೆಂಪು ಬಹುಬೇಗನೆ ಕವಿ-ಸಾಹಿತಿಯಾಗಿ ಅರಳಲು, ಧೀಮಂತಿಕೆಯನ್ನು ಬೆಳೆಸಿಕೊಳ್ಳಲು, ವಿಶ್ವಮಾನವತೆಯ ಆಶೋತ್ತರಗಳನ್ನು ಮೈದುಂಬಿಕೊಳ್ಳಲು ಕಾರಣವಾಯಿತು. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಅವರಿಗಿದ್ದ ಅಗಾಧ ಜ್ಞಾನದಾಹ ಗ್ರಂಥಾಲಯದಲ್ಲಿ ಗಂಟೆಗಟ್ಟಲೆ, ಕೆಲವೊಮ್ಮೆ ದಿನಗಟ್ಟಲೆ ಕುಳಿತು ಶ್ರದ್ಧೆಯಿಂದ ಇಂಗ್ಲಿಷ್ ಕಾವ್ಯ ಕಥೆ ಕಾದಂಬರಿ ವಿಮರ್ಶೆಗಳನ್ನು ಅಧ್ಯಯನ ಮಾಡಿದ್ದರಿಂದಲೇ ತಾನು ಇಂಗ್ಲಿಷ್‌ನಲ್ಲೇ ಅಂಥವುಗಳನ್ನು ರಚಿಸಬಲ್ಲೆ ಎನ್ನುವ ಆತ್ಮವಿಶ್ವಾಸ ಮೂಡಿ 18ನೇ ವಯಸ್ಸಿನಲ್ಲೇ 'ಬಿಗಿನರ್ಸ್ ಮ್ಯೂಸ್' ಸಂಕಲನ ಪ್ರಕಟಿಸಿ ಅಚ್ಚರಿ ಮೂಡಿಸಿದ ಕುವೆಂಪು ಮುಂದೆ ಕರ್ನಾಟಕದ ನಾಡಗೀತೆಯಾಗಿ ಆಯ್ಕೆಯಾದ "ಜೈ ಭಾರತ ಜನನಿಯ ತನುಜಾತೆ ಜಯಹೇ ಕರ್ಣಾಟಕ ಮಾತೆ" ಮತ್ತು ರೈತಗೀತೆ "ನೇಗಿಲ ಹಿಡಿದಾ ಹೊಲದೊಳು ಹಾಡುತ ಉಳುವಾ ಯೋಗಿಯ ನೋಡಲ್ಲಿ" ಇವುಗಳನ್ನು 24-25ರ ವಯೋಮಾನದಲ್ಲೇ ಬರೆದಿದ್ದರು. 35 ತುಂಬುವುದರೊಳಗೆ ಕ್ರಾಂತಿಕಾರಿ ನಾಟಕಗಳನ್ನು ರಚಿಸಿದ್ದರು ಎನ್ನುವುದು, ಇದು ಎಲ್ಲೋ ಒಂದು ಕಡೆ ನಿಲುಗಡೆಯಾಗದೆ ಮಹಾಕಾದಂಬರಿ, ಮಹಾಕಾವ್ಯ, ಮಹಾ ಆತ್ಮಕಥನ, ಜನತಾ ಪ್ರಜ್ಞೆಯನ್ನು ವೈಚಾರಿಕವಾಗಿ ಜಾಗೃತಿಗೊಳಿಸುವ ಲೇಖನಗಳನ್ನು ಬರೆಯುತ್ತಾ ನಿಂತ ನೀರಾಗಿರುವ ಸಮಾಜವನ್ನು ಚಲನಶೀಲಗೊಳಿಸುವಂಥ ಚೈತನ್ಯವನ್ನು ತುಂಬುವ ಉಜ್ವಲ ಭಾಷಣಗಳಿಂದ ಯುವಕ ಯುವತಿಯರಲ್ಲಿ ಜಾಗೃತಿ ಮೂಡಿಸುತ್ತ ಹೋದುದು ಅಚ್ಚರಿಯ ಮೇಲೆ ಅಚ್ಚರಿ ಎನಿಸುವಂಥ ಸಂಗತಿಗಳು. ಇಂಥವನ್ನೆಲ್ಲ ಕುವೆಂಪು ಪ್ರತಿಪಾದಿಸಿದ ಕಾಲಘಟ್ಟಕ್ಕಷ್ಟೇ ಸೀಮಿತಗೊಳಿಸಲಾಗದು. ಸರ್ವಾಧಿಕಾರದತ್ತ ಹರಿಯುತ್ತಿದೆಯೇನೋ ಎಂಬಂತೆ ರಾಷ್ಟ್ರ ರಾಜಕಾರಣ ಸೃಷ್ಟಿಸಿರುವ ಬಿಕ್ಕಟ್ಟಿನಿಂದಾಗಿ ನಾವೆಲ್ಲ ಅನುಭವಿಸುತ್ತಿರುವ ಆತಂಕ ಮತ್ತು



ಅದರಿಂದ ಪಾರಾಗಲು ಅನುಸರಿಸಬೇಕಾದ ಕ್ರಮಗಳ ಬಗೆಗೂ ದಿಗ್ದರ್ಶಿಯಾಗಬಲ್ಲ ಮಾತುಗಳನ್ನು ಕುವೆಂಪು ಆಡಿರುವುದರಿಂದ ಅವರ ವಿಚಾರಗಳು ಇಂದಿಗೆ ಹೆಚ್ಚು ಪ್ರಸ್ತುತವಾಗಿವೆ. ಜಿ. ಕೃಷ್ಣಪ್ಪನವರು 'ನೆನಪಿನ ದೋಣಿಯಲ್ಲಿ' ಮತ್ತು ಸಮಗ್ರ ಸಾಹಿತ್ಯ ರಾಶಿಯನ್ನು ಶೋಧಿಸಿ, ಅವುಗಳಲ್ಲಿ ಮಕ್ಕಳ ಮನಸ್ಸಿಗೆ ಹಿಡಿಸುವಂತೆ ಯಾವ್ಯಾವುದನ್ನು ಎಷ್ಟೆಷ್ಟು ಪ್ರಮಾಣದಲ್ಲಿ ಕೊಡಬೇಕೆನ್ನುವುದನ್ನು ಸಮತೂಕದಲ್ಲಿರುವಂತೆ ನಿರ್ಣಯಿಸಿ ಕೃತಿಯೊಂದರ ಚೌಕಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಕುವೆಂಪುವನ್ನು ಅವರ ಸಾಹಿತ್ಯದ ಮಹತ್ವವನ್ನು ಕವಿತೆ, ಕಥೆ, ಪ್ರಬಂಧ, ನಾಟಕಗಳ ಓದಿನ ಮೂಲಕ ಮೇಲ್ಪದರದಲ್ಲಿ ಗ್ರಹಿಸಿರುವ ಮಕ್ಕಳು ಕೃಷ್ಣಪ್ಪನವರ ಈ ಕೃತಿಯನ್ನು ಮನಸ್ಸಿಟ್ಟು ಓದಿದರೆ ತಂದೆತಾಯಿ ಶಿಕ್ಷಕರು ಓದುವಂತೆ ಮಾಡಿದರೆ ಕುವೆಂಪು ಎಲ್ಲೋ ದೂರದಲ್ಲಿರುವ ಹತ್ತಿಪ್ಪತ್ತರ ಗುಂಪಿನಲ್ಲಿ ಒಬ್ಬರಾಗಿರುವ ಸಾಹಿತಿ ಎನ್ನುವ ಸಾಮಾನ್ಯ ಕಲ್ಪನೆ ಅಳಿದು ಅವರು ನಮ್ಮವರೇ ಎನ್ನುವ ಪ್ರೀತಿಯೂ ಗೌರವವೂ ಆಪ್ತತೆಯೂ ಬೆಳೆಯುತ್ತದೆ; ಕುವೆಂಪು ಸಾಹಿತ್ಯರಾಶಿಗೆ ಪ್ರೀತಿಯಿಂದ ಕುತೂಹಲದಿಂದ ಪ್ರವೇಶಿಸುವ ಪ್ರೇರಣೆ ದೊರೆಯುತ್ತದೆ; ಪುಟ್ಟ ಮನಸ್ಸುಗಳಿಗೆ ಅವರಿಗೆ ಅರಿವಿಲ್ಲದಂತೆಯೇ ವಿಶ್ವಮಾನವ ಸಂದೇಶ ರವಾನೆಯಾಗುತ್ತದೆ. ಅವರ ನಡೆನುಡಿಗಳಲ್ಲಿ ಮಾರ್ಪಾಟಾಗುತ್ತದೆ. ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಬೇಕಾದ ಶಕ್ತಿ ಅವರ ತನುಮನಗಳಲ್ಲಿ ಪ್ರವಹಿಸುತ್ತದೆ. 'ನಮ್ಮ ಕುವೆಂಪು' ಎನ್ನುವ ಹೆಸರಿನಲ್ಲಿ ಇಂಥದೊಂದು ವಿಶಿಷ್ಟವೂ ಮೌಲಿಕವೂ ಆದ ಕೃತಿಯನ್ನು ಕನ್ನಡದ ಮಕ್ಕಳಿಗೆ ಕಾಣಿಕೆಯಾಗಿ ನೀಡಿರುವುದಕ್ಕಾಗಿ ನಾಡೋಜ ಕೃಷ್ಣಪ್ಪನವರನ್ನು ಅಭಿನಂದಿಸುತ್ತೇನೆ.

**–ಡಾ. ಬೈರಮಂಗಲ ರಾಮೇಗೌಡ**





# ಪ್ರಕಾಶಕರ ಮಾತು

ಕಳೆದ ಇಪ್ಪತ್ತು ವರ್ಷಗಳಿಂದ ಸಾಹಿತ್ಯ-ಸಂಸ್ಕೃತಿ ಹಾಗೂ ಜನಪರ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿರುವ ನಮ್ಮ 'ಕನ್ನಡ ಜನಶಕ್ತಿ ಕೇಂದ್ರ'ವು ತನ್ನ ವಿಶಿಷ್ಠ ಹಾಗೂ ವೈವಿಧ್ಯಮಯ ಕಾರ್ಯಕ್ರಮಗಳಿಂದಾಗಿ ಬೆಂಗಳೂರು ನಗರದ ಸುಸಂಸ್ಕೃತ ನಾಗರೀಕರ ಅಭಿಮಾನ ಮತ್ತು ಮೆಚ್ಚುಗೆಯನ್ನು ಪಡೆದು ಸದೃಢವಾಗಿ ಮುನ್ನಡೆದಿದೆ.

ನಮ್ಮ ನಾಡು-ನುಡಿಗಾಗಿ ದುಡಿದು ಧವಳ ಕೀರ್ತಿಯನ್ನು ಸಂಪಾದಿಸಿ ಅಜರಾಮರರಾದ ಧೀಮಂತ ಚೇತನಗಳ ವ್ಯಕ್ತಿತ್ವ, ಬದುಕು, ಸಾಧನೆಗಳನ್ನು ಸರಳ ಕನ್ನಡದಲ್ಲಿ ಸಂಕ್ಷಿಪ್ತವಾಗಿ, ಪರಿಣಾಮಕಾರಿಯಾಗಿ, ಇಂದಿನ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಪರಿಚಯಿಸುವ ಪ್ರಯತ್ನವಾಗಿ 'ಕನ್ನಡ ಕುಲದೀಪಕರು' ಮಾಲಿಕೆಯಲ್ಲಿ ಅನೇಕ ಮಹನೀಯರ ಕುರಿತಾದ ಪುಸ್ತಕಗಳನ್ನು ನಮ್ಮ ಸಂಸ್ಥೆಯು ಪ್ರಕಟಿಸಿದೆ.

ಬೆಂಗಳೂರು ಮಹಾನಗರದಲ್ಲಿ ಮಹಾಕವಿ ಕುವೆಂಪುರವರ ಆಳೆತ್ತರದ ಕಂಚಿನ ಪ್ರತಿಮೆಯನ್ನು ಸ್ಥಾಪಿಸಲು ಸಂಪೂರ್ಣ ಸಹಕಾರ ನೀಡಿದ ಪಿ.ಇ.ಎಸ್. ವಿಶ್ವವಿದ್ಯಾಲಯದ ಕುಲಾಧಿಪತಿಗಳೂ ಹಾಗೂ ವಿಧಾನ ಪರಿಷತ್ತಿನ ಸದಸ್ಯರೂ ಆಗಿದ್ದ ಡಾ. ಎಂ.ಆರ್. ದೊರೆಸ್ವಾಮಿ ಅವರನ್ನು ಸದಾ ಕಾಲ ಕೃತಜ್ಞತೆಯಿಂದ ನೆನೆಯುತ್ತೇನೆ.

ಮಹಾಕವಿ ಕುವೆಂಪು ಅವರ 'ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ' ಮತ್ತು 'ವಿಚಾರ ಕ್ರಾಂತಿಗೆ ಆಹ್ವಾನ', ಈ ಎರಡು ಭಾಷಣಗಳಿಗೆ 50 ವರ್ಷ ತುಂಬುತ್ತಿರುವ ಸವಿ ನೆನಪಿನಲ್ಲಿ, ನಾಡಿನ ಖ್ಯಾತ ಬರಹಗಾರರಾದ ನಾಡೋಜ ಡಾ. ಜಿ. ಕೃಷ್ಣಪ್ಪ ಅವರ 'ನಮ್ಮ ಕುವೆಂಪು' ಕೃತಿಯನ್ನು ಪ್ರಕಟಿಸುತ್ತಿರುವುದು ನಮ್ಮ ಸಂಸ್ಥೆಗೆ ಹೆಮ್ಮೆ.



ನನ್ನ ಯೋಚನೆ-ಯೋಜನೆಯಲ್ಲಿ ಜೊತೆಯಾಗಿ ನಿಂತು ಸ್ಫೂರ್ತಿಯ ಶಕ್ತಿಯಾಗಿ ಕಾರ್ಯನಿರ್ವಹಿಸುತ್ತಿರುವ ಕನ್ನಡ ಜನಶಕ್ತಿ ಕೇಂದ್ರದ ಎಲ್ಲಾ ಪದಾಧಿಕಾರಿಗಳಿಗೂ ಕೃತಜ್ಞತೆ ಸಲ್ಲಿಸುತ್ತೇನೆ.

ಅಂದವಾಗಿ ಮುದ್ರಿಸಿಕೊಟ್ಟ ಕರ್ನಾಟಕ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲೀಕರೂ ಹಾಗೂ ಸಿಬ್ಬಂದಿ ವರ್ಗದವರಿಗೂ ನನ್ನ ಕೃತಜ್ಞತೆಗಳು.

ನನ್ನೆಲ್ಲಾ ಕಾರ್ಯಚಟುವಟಿಕೆಗಳಿಗೆ ಸದಾ ಪ್ರೋತ್ಸಾಹ ನೀಡುತ್ತಿರುವ ನನ್ನ ಕುಟುಂಬದವರನ್ನು ಹಾಗೂ ಮೊಮ್ಮಗ ವಿ. ಚೈತ್ರೋದಯನನ್ನು ಪ್ರೀತಿಯಿಂದ ನೆನೆಯುತ್ತೇನೆ.

ಹೃದಯವಂತ ಓದುಗರಿಗೆ ನನ್ನ ಅನಂತಾನಂತ ವಂದನೆಗಳು.

ಬೆಂಗಳೂರು

**ಸಿ. ಕೆ. ರಾಮೇಗೌಡ**
ಅಧ್ಯಕ್ಷರು, ಕನ್ನಡ ಜನಶಕ್ತಿ ಕೇಂದ್ರ
ಬೆಂಗಳೂರು.



# ಲೇಖಕರ ನುಡಿ

ಮಹಾಕವಿ ಕುವೆಂಪು ಅವರ ಜೀವನ ಮತ್ತು ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವ ಕೃತಿ 'ನಮ್ಮ ಕುವೆಂಪು'. ಇಂತಹ ಪುಸ್ತಕವನ್ನು ರಚಿಸಲು ನನಗೆ ಪ್ರೇರಣೆ ನೀಡಿದವರು ಪ್ರೊ॥ ಎಂ.ಜಿ. ಚಂದ್ರಶೇಖರಯ್ಯ. ಅವರ ಕಾವ್ಯಪ್ರೀತಿ ಮಾರ್ಗದರ್ಶನವನ್ನು ನಾನು ಸದಾ ನೆನೆಯುತ್ತೇನೆ.

ಡಾ.ಬೈರಮಂಗಲ ರಾಮೇಗೌಡರು ಕನ್ನಡದ ಪ್ರಮುಖ ವಿಮರ್ಶಕರು. ಅವರನ್ನು ಈ ಕೃತಿಗೆ ಮುನ್ನುಡಿ ಬರೆದುಕೊಡಲು ಕೇಳಿಕೊಂಡೆನು. ಅವರುಪ್ರೀತಿಯಿಂದ ಮುನ್ನುಡಿ ಬರೆದು ಪ್ರೋತ್ಸಾಹಿಸಿದ್ದಾರೆ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಬೆಂಗಳೂರಿನ ಸ್ವಾತಂತ್ರ್ಯ ಉದ್ಯಾನದ ಮುಂಭಾಗದಲ್ಲಿ ಕೊಡುಗೈದಾನಿಯಾಗಿ ಒಂಬತ್ತು ಅಡಿ ಎತ್ತರದ ಕುವೆಂಪು ಕಂಚಿನ ಪ್ರತಿಮೆಯನ್ನು ರಾಜಧಾನಿಯಲ್ಲಿ ಪ್ರಥಮವಾಗಿ ಸ್ಥಾಪನೆಯಾಗಲು ಕಾರಣರಾದವರು ನಾಡಿನ ಶ್ರೇಷ್ಠ ಶಿಕ್ಷಣ ತಜ್ಞ, ಕುವೆಂಪು ಅಭಿಮಾನಿ ಡಾ॥ ಎಂ.ಆರ್. ದೊರೆಸ್ವಾಮಿ. ಅವರಿಗೆ ಈ ಕೃತಿಯನ್ನು ಅರ್ಪಿಸಿದ್ದೇನೆ. ಇದನ್ನವರು ಪ್ರೀತಿಯಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುತ್ತೇನೆ.

ನನ್ನ ಕುವೆಂಪು ಅಧ್ಯಯನಕ್ಕೆ ತುಂಬು ಪ್ರೋತ್ಸಾಹ ನೀಡುತ್ತಿರುವ ಶ್ರೀಮತಿ ಕೆ.ಪಿ.ತಾರಿಣಿ, ಪ್ರೊ॥ ಚಿದಾನಂದಗೌಡ, ಶ್ರೀ ಕಡಿದಾಳ್ ಪ್ರಕಾಶ್, ಪ್ರೊ॥ ಮಲ್ಲೆಪುರಂ ಜಿ. ವೆಂಕಟೇಶ್, ಡಾ.ಕೆ. ಅನಂತರಾಮು, ಶ್ರೀ ಎಂ. ನರಸಿಂಹ, ಪ್ರೊ॥ ಟಿ.ಎನ್. ವಾಸುದೇವಮೂರ್ತಿ, ಪ್ರೊ॥ ಎ.ಕೆ.ರವಿಶಂಕರ ಅವರಿಗೆ ನನ್ನ ನಮನಗಳು. ಪತ್ರಕರ್ತರು, ಉತ್ತಮ ಫೋಟೋಗ್ರಾಫರ್ ಆದ ನಲ್ಮೆಯ ಸ್ನೇಹಿತ ಶ್ರೀ ಕೆ. ಶಿವಸುಬ್ರಹ್ಮಣ್ಯ ಅವರು ತೆಗೆದಿರುವ ನನ್ನ ಫೋಟೋವನ್ನು ಹಿಂಬದಿಯ ರಕ್ಷಾ ಪುಟದಲ್ಲಿ ಬಳಸಿಕೊಂಡಿರುವೆನು. ಅವರ ಪ್ರೀತಿಯ ನಡೆ ಒಂದು ಆದರ್ಶ.



ನನ್ನ ಸಾಹಿತ್ಯ ಅಧ್ಯಯನಕ್ಕೆ ತುಂಬು ಉತ್ತೇಜನ ನೀಡುತ್ತಿರುವ ನನ್ನ ಪತ್ನಿ, ಮಕ್ಕಳು, ಅಳಿಯಂದಿರು ಮತ್ತು ಸೊಸೆಯನ್ನು ನೆನೆಯುವುದು; ಪ್ರೀತಿಯ ಮೊಮ್ಮಕ್ಕಳಾದ ಚಿ॥ ಎಂ. ಉಜ್ವಲ್, ಚಿ ॥ ಜೆ.ಸುಜನ, ಕು॥ ಜೆ. ಸುಗ್ಗಿ, ಚಿ॥ ಬಿ.ಎಸ್. ಸಂವಿತ್ ಕೃಷ್ಣ, ಚಿ॥ ಬಿ.ಎಸ್. ಸುಮೇರು ಕೃಷ್ಣ ಅವರ ಮುಗ್ಧ ಆನಂದಕ್ಕೆ ನಲಿಯುವುದು ನನ್ನ ಕುಟುಂಬ ಸಾಹಿತ್ಯ ಪೋಷಕ ವಾತಾವರಣದ ಆಹ್ಲಾದ.

'ನಮ್ಮ ಕುವೆಂಪು' ಕೃತಿಯನ್ನು ಪ್ರಕಟಿಸುತ್ತಿರುವ ಕನ್ನಡ ಹೋರಾಟಗಾರ ಶ್ರೀ ಸಿ.ಕೆ. ರಾಮೇಗೌಡ ಅವರಿಗೆ, ಮುದ್ರಕರಾದ 'ಕರ್ನಾಟಕ ಆಫ್‌ಸೆಟ್ ಪ್ರಿಂಟರ್ಸ್' ಅವರಿಗೆ ವಂದನೆಗಳು.

ನಾನು ಈ ಮೊದಲು ರಚಿಸಿರುವ ಕೃತಿಗಳನ್ನು ಓದಿ ಸವಿದ ಕನ್ನಡ ಸಾಹಿತ್ಯಾಸಕ್ತರು ಮತ್ತು ವಿದ್ವನ್ಮಣಿಗಳು ಈ ಕೃತಿಯನ್ನು ಪ್ರೀತಿಯಿಂದ ಸ್ವೀಕರಿಸಿ ಆಶೀರ್ವದಿಸಬೇಕೆಂದು ಪ್ರಾರ್ಥಿಸುತ್ತೇನೆ. ವಿದ್ಯಾರ್ಥಿಗಳು ಕುವೆಂಪು ಜೀವನ ಮೌಲ್ಯಗಳನ್ನು ಓದಿ ತಿಳಿದು ಘನ ವ್ಯಕ್ತಿಗಳಾಗಬೇಕೆಂದು ಆಶಿಸುತ್ತೇನೆ.

**ಡಾ. ಜಿ. ಕೃಷ್ಣಪ್ಪ**

# ಪರಿವಿಡಿ

# ನಮ್ಮ ಕುವೆಂಪು

## ಬಾಲ್ಯ

'ಕುವೆಂಪು' ಎಂಬುದು ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಎಂಬ ಪೂರ್ಣನಾಮದ ಕವಿವರ್ಯರ ಪ್ರಥಮಾಕ್ಷರಗಳ ಸುಂದರ ಕಾವ್ಯನಾಮ. ಅವರು ತಾಯಿಯ ತವರು ಮನೆ 'ಹಿರಿಕೊಡಿಗೆ'ಯಲ್ಲಿ 29-12-1904 ಎಂದರೆ ಕ್ರೋಧಿನಾಮ ಸಂವತ್ಸರದ ಮಾರ್ಗಶೀರ್ಷ ಬಹುಳ ಸಪ್ತಮೀ ಗುರುವಾರದ ಉತ್ತರಾ ನಕ್ಷತ್ರದಲ್ಲಿ ಹುಟ್ಟಿದರು. ವಿಶ್ವದ ಸಾಹಿತ್ಯ ಕ್ಷಿತಿಜದಲ್ಲಿ ಹಿರಿಯ ಕೊಡಿಗೆಯಾಗಿ ಮಹಾಕವಿಯಾದರು. ಅವರ ತಂದೆ ವೆಂಕಟಪ್ಪ, ತಾಯಿ ಸೀತಮ್ಮ. ತಾಯಿಯ ತಂದೆ ಅಜ್ಜ ತಿಮ್ಮಯ್ಯ ನಾಯಕರು ಕಲಾಭಿರುಚಿ ಹೊಂದಿದ್ದು ರಾಮಾಯಣ ಭಾರತಾದಿಗಳ ಪ್ರಸಂಗ, ಯಕ್ಷಗಾನ ತಾಳಮದ್ದಳೆ ಭಾಗವತರಾಟ ನಡೆಸುತ್ತಿದ್ದರು.

ಕುವೆಂಪು ಅವರ ಕುಪ್ಪಳಿಯನ್ನು ದೊಡ್ಡಮನೆ ಎಂದು, ಮನೆಯವರನ್ನು ದೊಡ್ಡ ಮನೆತನದವರೆಂದು ಭಾವಿಸಿ ಜನ ಗೌರವಿಸುತ್ತಿದ್ದರು. ಅವರ ಮನೆ ಪ್ರಕೃತಿ ಸೌಂದರ್ಯದ ನಿಚ್ಚ ನೆಲೆವೀಡಾದ ಸಹ್ಯಾದ್ರಿ ಶ್ರೇಣಿಯ ಮೇಲೆ ಕಾಡು ಬೆಟ್ಟ ಗುಡ್ಡಗಳ ನಡುವೆ ಇತ್ತು. ಅವರ ಮುತ್ತಜ್ಜ ಓಬಯ್ಯಗೌಡರು. ಅಜ್ಜ ಬಸಪ್ಪ ಗೌಡರು. ತಾತ ಮಂಜಪ್ಪಗೌಡರು.

ಅಜ್ಜ ಬಸಪ್ಪ ಗೌಡರು ಮೃದು ಸ್ವಭಾವದ ಧಾರ್ಮಿಕ ವ್ಯಕ್ತಿಯಾಗಿದ್ದರು. ಅವರ ನೇತೃತ್ವದಲ್ಲಿ ನವರಾತ್ರಿಯ ಒಂಬತ್ತು ದಿನಗಳೂ ಅಖಂಡವೆಂಬಂತೆ ಸರಸ್ವತೀ ಪೂಜೆ ನಡೆಯುತ್ತಿತ್ತು. ಅವರು ಆಗಿನ ಕಾಲಕ್ಕೆ ನೂರಾರು ರೂಪಾಯಿ ಕೊಟ್ಟು ಬರೆಸಿದ್ದ ಓಲೆಗರಿ ಪುಸ್ತಕಗಳು, ಮನೆಯ ಲೇವಾದೇವಿ ಪುಸ್ತಕಗಳ ಜೊತೆಗೆ ಮಕ್ಕಳ ಸ್ಲೇಟು ಪುಸ್ತಕಗಳು ಪೂಜೆಗೊಳ್ಳುತ್ತಿದ್ದವು.



ಆಗ ಅಖಂಡವಾಗಿ ಹಗಲು ರಾತ್ರಿ ಆ ಕೃತಿಗಳ ಮುಂದೆ ಉರಿಸುತ್ತಿದ್ದ ನಂದಾದೀಪ ಕುವೆಂಪು ಅವರಲ್ಲಿ ಜ್ಞಾನದ ಬೆಳಕನ್ನು ಹೊತ್ತಿಸಿದ ಬಾಲ್ಯ ಕಾಲ. ಅದನ್ನು ಅವರು 'ಅದರಲ್ಲಿ ಏನೊ ಒಂದು 'ಅನುಭಾವ'ದ ಸಂಪತ್ತು ನಮ್ಮ ಬುದ್ಧಿಗೆ ಅಗೋಚರವಾಗಿ ಅಂತಃಪ್ರಜ್ಞೆಗೆ ಸೋಂಕುತ್ತಿತ್ತೆಂದು ತೋರುತ್ತದೆ[1] ಎಂದು ತಿಳಿಸಿದ್ದಾರೆ.

ಅವರು ತಮ್ಮ ಜನ್ಮದಿನವಾದ 29-12-1965ರಂದು 'ನೆನಪಿನ ದೋಣಿಯಲ್ಲಿ' (ಆತ್ಮಕಥೆ) ರಚಿಸಲು ಪ್ರಾರಂಭಿಸಿದರು. ಅದೊಂದು ಅವರ ಜೀವನ ಸಾಧನೆಯ ಹೆಜ್ಜೆ ಗುರುತುಗಳು. ಅದು 1068 ಪುಟಗಳ ಬೃಹತ್ ಗ್ರಂಥ. ಅದನ್ನು ಆಧರಿಸಿದ್ದು ಈ ಕೃತಿ.

ಅಜ್ಜಯ್ಯನು ಕುವೆಂಪು ಮತ್ತು ಬಾಲಕರನ್ನೆಲ್ಲ ದೇವರ ಪೂಜಾ ಕಾರ್ಯದಲ್ಲಿ ಪಾಲುಗೊಳ್ಳುವಂತೆ ಮಾಡಿದ್ದರು. ಆ ಕಾರಣ ಅವರಲ್ಲಿ ದೇವರ ಬಗ್ಗೆ ಅನನ್ಯ ಭಕ್ತಿ ಇತ್ತು. ಅವರು ಅನಂತ ಚೈತನ್ಯವನ್ನು ಆರಾಧಿಸುವ ಭಕ್ತರಾಗಿದ್ದರು. ಅವರು ಸುಧಾರಣಾ ಭಾವಕ್ಕೆ ಒಳಗಾಗಿದ್ದ ಒಕ್ಕಲಿಗ ಜನಾಂಗವಾಗಿದ್ದು, ಕುಡಿಯುವುದು ಅವಮಾನಕರವೆಂದು ತಿಳಿದಿದ್ದರು.

ಅಜ್ಜಯ್ಯ ಕಾರ್ತಿಕ ಮಾಸದಲ್ಲಿ ಉದ್ದಗಳುವಿನ ತುದಿಯಲ್ಲಿ ಲಾಂದ್ರದ ದೀಪ ಬೆಳಗಿಸುತ್ತಿದ್ದರು. ಕುವೆಂಪು ಅವರಿಗೆ ಬಾಲ್ಯದಲ್ಲಿ ಆ ಕಾರ್ತಿಕ ದೀಪದ ಆರೋಹಣ ಅಧ್ಯಾತ್ಮಿಕ ಸ್ವರ್ಗಾರೋಹಣದಂತಿತ್ತು. ಅದು ಅವರ ಚೇತನದ ಅಭೀಪ್ಸೆಯ ಊರ್ಧ್ವ ಗಮನ ಸಾಹಸಕ್ಕೆ ಸಂಕೇತವಾಗಿತ್ತು. ಆ ಚೇತನ ಅವರ ಅಂತರ್ಯದ ಭಾವಕೋಶದಲ್ಲಿ ಸದಾ ಜಾಗೃತವಾಗಿದ್ದು 'ಓ ನನ್ನ ಚೇತನ' ವಿಶ್ವಮಾನವ ಕವನ ರಚನೆಗೆ ಕಾರಣವಾಗಿದೆ ಎಂದು ಹೇಳಬಹುದು.

---

1. ಕುವೆಂಪು: ನೆನಪಿನ ದೋಣಿಯಲ್ಲಿ (ಆತ್ಮಕಥೆ), ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ.), ಕುಪ್ಪಳಿ, 2013, ಪು-19





ಅವರದು ಅವಿಭಕ್ತ ಕುಟುಂಬವಾಗಿತ್ತು. ಅವರು ಇತರ ಮಕ್ಕಳಲ್ಲಿ ತಾನೂ ಒಬ್ಬ, ಇತರ ಅಮ್ಮಂದಿರಲ್ಲಿ ತನ್ನ ಅವ್ವನೂ ಒಬ್ಬಳು ಎಂಬ ಸಾಮೂಹಿಕ ಭಾವನೆಗೆ ಒಳಗಾಗಿದ್ದರು. ಅದರಂತೆಯೆ ಅವರು ಕುಟುಂಬದ ಐಕ್ಯವನ್ನು ಜೀವನದಲ್ಲಿ ಸಾಧಿಸಿದರು. ಅದು ಅವರಿಗೆ ವಿಶ್ವಮಾನವ ಚಿಂತನೆಗೆ ಬುನಾದಿಯಾಗಿತ್ತು.

ಕುವೆಂಪು ಅವರ ತಂದೆಯವರು ಉಡುಗೆ ತೊಡುಗೆಯಲ್ಲಿ ಅತಿ ನಿರಾಡಂಬರರಾಗಿದ್ದರು. ಕುವೆಂಪುಗೆ ಹನ್ನೊಂದು ವರ್ಷವಾಗಿದ್ದಾಗ ಅವರು ತಮ್ಮ ನಡುಹರೆಯದಲ್ಲಿ ಅಕಾಲಿಕವಾಗಿ ದುಃಖಕರ ಸನ್ನಿವೇಶದಲ್ಲಿ ತೀರಿಕೊಂಡರು.

ಕುವೆಂಪು ಅವರು 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ ರಚನೆಯ ಆಲೋಚನೆ ತಮಗೆ ಬಾಲ್ಯದಲ್ಲಿಯೆ ಉಂಟಾಯಿತು ಎಂದು ಆತ್ಮಕಥೆಯಲ್ಲಿ ತಿಳಿಸಿದ್ದಾರೆ. ಒಂದು ರಾತ್ರಿ ವಾಟಗಾರು ಮಂಜಪ್ಪಗೌಡರು ಓಲೆಗರಿಯ ರಾಮಾಯಣದಲ್ಲಿ ಆಂಜನೇಯನ ಸಮುದ್ರ ಲಂಘನ ಪ್ರಸಂಗವನ್ನು ವಾಚಿಸುತ್ತಿದ್ದರಂತೆ. ಅದನ್ನು ತಂದೆಯ ಶಾಲಿನಲ್ಲಿ ಹುದುಗಿ ಬಾಲಕ ಕುವೆಂಪು ವಿಸ್ಮಯಾನಂದ ಭಂಗಿಯಿಂದ ಆಲಿಸುತ್ತಿದ್ದರಂತೆ. ಊಟದ ಕಾರಣ ಆ ಪ್ರಸಂಗ ನಿಂತಾಗ, ನಾನೇ ಇದನ್ನೆಲ್ಲ ಓದಿ ಕಲಿತು ಬಿಟ್ಟರೆ, ನಾನು ಯಾರ ಹಂಗೂ ಇಲ್ಲದೆ ಹನುಮಂತನೊಡನೆ ಹಾರಬಹುದು ಎಂದು ಸಾಹಸದ ಸಂಕಲ್ಪಕ್ಕೆ ಒಳಗಾಗಿದ್ದರಂತೆ. ಅದನ್ನು ಅವರು ಹೀಗೆ ದಾಖಲಿಸಿದ್ದಾರೆ: 'ಬಹುಷಃ ಆ ಅಭೀಪ್ಸೆಯ ಹೃದಯದಲ್ಲಿ, ಬೀಜದ ಅಂತರತಮ ಗರ್ಭದಲ್ಲಿ ಮುಂಬರುವ ಮಹಾವಟ ವೃಕ್ಷವು ಸುಪ್ತಗುಪ್ತವಾಗಿರುವಂತೆ, ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ಅಂತರ್ಗತವಾಗಿ ನಿದ್ರಿಸುತ್ತಿತ್ತೊ ಏನೋ?' (ನೆ.ದೋ. ಪು–26)

## ಬಾಲ್ಯದ ಉಪ್ಪರಿಗೆ ಪಾಠಶಾಲೆ

ವೆಂಕಟಪ್ಪನವರು ಮತ್ತು ಚಿಕ್ಕಪ್ಪ ರಾಮಣ್ಣಗೌಡರು ಮಕ್ಕಳಿಗೆ ಬ್ರಾಹ್ಮಣ ಐಗಳಿಂದ, ಕ್ರಿಶ್ಚಿಯನ್ ಪಾದ್ರಿಗಳಿಂದ ಮನೆಯಲ್ಲಿ ಪಾಠ ಹೇಳಿಕೊಡುವ ವ್ಯವಸ್ಥೆ



ಮಾಡಿದ್ದರು. ಬ್ರಿಟಿಷ್ ಸಾಮ್ರಾಜ್ಯ ಬೇರೂರಲು ಅವರು ಸ್ಥಳೀಯರಿಗೆ ಇಂಗ್ಲಿಷ್ ಭಾಷೆಯನ್ನು ಕಲಿಸಿ, ಇಂಗ್ಲಿಷ್ ಭಾಷೆಯನ್ನೇ ಶಿಕ್ಷಣ ಮಾಧ್ಯಮವನ್ನಾಗಿಸಿದರು. ಕ್ರೈಸ್ತ ಮಿಷನರಿಗಳ ಸಹಾಯದಿಂದ ಕುಪ್ಪಳಿ, ವಾಟಗಾರು, ದೇವಂಗಿ ಬಳಗಟ್ಟೆ ಒಂದೆ ಮನೆಯ ಹಳ್ಳಿಗಳಿಂದ ತರುಣರು ಮೈಸೂರು, ಬೆಂಗಳೂರಿನ ದೂರದ ಊರುಗಳಿಗೆ ಹೋಗಿ ವಿದ್ಯಾಭ್ಯಾಸ ಮಾಡಿ ಹಿಂತಿರುಗಿದ್ದರು. ಆ ಎಲ್ಲ ಸ್ನೇಹ ಸೌಹಾರ್ದ ಸಂಪರ್ಕಗಳ ಪರಿಣಾಮವಾಗಿ ಕ್ರೈಸ್ತ ಪಾದ್ರಿಗಳು ಇವರ ಕುಪ್ಪಳಿಯ ಉಪ್ಪರಿಗೆ ಶಾಲೆಗೆ ಓರ್ವ ಕ್ರೈಸ್ತ ತರುಣನನ್ನು ಮೇಷ್ಟರಾಗಿ ಕಳಿಸಿದರು. ಅವರ ಹೆಸರು ಮೋಸೆಸ್. ಅವರು ಬೆಳ್ಳನೆಯ ಕಚ್ಚೆಯುಟ್ಟು, ಹೊಸನಮೂನೆ ಷರ್ಟು ಹಾಕಿ, ಮೇಲೆ ಕಣ್ಣು ಸೆಳೆಯುವ ಬಣ್ಣದ ಕೋಟು ಹಾಕುತ್ತಿದ್ದರು. ಕ್ರಾಪು ಬಿಟ್ಟಿದ್ದರು. ಮಕ್ಕಳು ಅವರ ವ್ಯಕ್ತಿತ್ವದ ಪ್ರಭಾವಕ್ಕೆ ಒಳಗಾದರು.

ಅವರು ಕನ್ನಡ ಇಂಗ್ಲಿಷ್ ಕಲಿಸುವುದರ ಜೊತೆಗೆ ಯೇಸು ಕ್ರಿಸ್ತನ ಕಥೆಯನ್ನು ಹೇಳಿದರು. 'ಮಾರ್ಕನ ಸುವಾರ್ತೆ' ಕಿರುಹೊತ್ತಿಗೆ ಕೊಟ್ಟರು. ಅದನ್ನು ಓದಿದ ಕುವೆಂಪು ಅವರು ವಿಸ್ಮಯಕಾರಿಕ ನೂತನ ಪ್ರಪಂಚಕ್ಕೆ ಪ್ರವೇಶಿಸಿದಂತಾದರು. ಪ್ರಾರ್ಥನೆ ಮತ್ತು ಶ್ರದ್ಧೆ ಸೇರಿದರೆ ಪವಾಡಗಳಾಗುತ್ತವೆ ಎಂಬುದನ್ನು ಕೇಳಿ ಅವರ ಚೇತನ ಭಕ್ತಿ ದೀಪ್ತವಾಯಿತು. ಯೇಸು ಸ್ವಾಮಿ ಗುಡ್ಡ ಹತ್ತಿ ಪ್ರಾರ್ಥನೆಗೆ ಹೋದಂತೆ ಒಂದು ಸಂಜೆ ಐಗಳ ಶಾಲೆಯ ಬಾಲಕರನ್ನು ಒಪ್ಪಿಸಿ ಕರೆದುಕೊಂಡು ಮನೆಯ ಹಿಂದಿರುವ ಗುಡ್ಡಕ್ಕೆ ಹೋಗಿ ಪ್ರಾರ್ಥಿಸಿದರು. ಅವರು ಅದನ್ನು, 'ಪ್ರಕೃತಿ ಸೌಂದರ್ಯದ ಹಿನ್ನೆಲೆ ನಮ್ಮ ಅಧ್ಯಾತ್ಮಿಕ ಪಿಪಾಸೆಗೆ ಮಾದಕೋದ್ದೀಪಕವಾಗಿತ್ತು' ಎಂದು ತಿಳಿಸಿದ್ದಾರೆ. ಆ ಗುಡ್ಡವೆ ಕ್ರಮೇಣ 'ಕವಿಶೈಲ'ವಾಗಿ, ನಾಡಿನ ಸಾಹಿತ್ಯ ಸಹೃದಯರ ನಲ್ಮೆಯ ತಾಣವಾಗಿದೆ.

ಒಮ್ಮೆ ಮೋಸೆಸ್ ಅವರ ಬಿಸ್ಕೆಟ್ ಪ್ಯಾಕೇಟ್ ಮಕ್ಕಳು ಯಾರೋ ಕದ್ದು ತಿಂದಿದ್ದರು. ಅದು ಯಾರೆಂದು ತಿಳಿಯದ ಚಿಕ್ಕಪ್ಪಯ್ಯ ರಾಮಣ್ಣಗೌಡರು ಪುಟ್ಟಪ್ಪನನ್ನು ಕೇಳಿದರು. ಆಗ ಅವರು ಗೊತ್ತಿಲ್ಲ ಎಂದು ಎಷ್ಟು ಹೇಳಿದರೂ ಮತ್ತೆ

ಒತ್ತಾಯಿಸಿದಾಗ 'ನಾನೆ ಕದ್ದು ತಿಂದವನು' ಎಂದರು. ಮತ್ತೆ ಮತ್ತೆ ಅದು ಎಲ್ಲಿತ್ತು, ಹೇಗೆ ಎಂಬ ಪ್ರಶ್ನೆಗೆ ಇವರಿಂದ ಸರಿ ಉತ್ತರ ಬಾರದಿದ್ದಾಗ ಇವನು ಕದ್ದಿಲ್ಲ ಎಂದು ಚಿಕ್ಕಪ್ಪಯ್ಯನವರಿಗೆ ಮನವರಿಕೆಯಾಯಿತು. ಈ ಘಟನೆಯಿಂದ ಕುವೆಂಪು ಅವರು ಬಾಲ್ಯದಿಂದಲೇ ಇನ್ನೊಬ್ಬರ ಮೇಲೆ ಆರೋಪ ಹೊರಿಸದ ಸತ್ಯಸಂಧ ವ್ಯಕ್ತಿತ್ವ ಹೊಂದಿದ್ದರು ಎಂದು ತಿಳಿದು ಬರುತ್ತದೆ.

## ಪ್ರಾಥಮಿಕ ವಿದ್ಯಾಭ್ಯಾಸ

ಕುವೆಂಪು ಅವರ ಚಿಕ್ಕಪ್ಪಯ್ಯ ರಾಮಣ್ಣಗೌಡರು ಮೈಸೂರಿನಲ್ಲಿ ಓದು ಪೂರೈಸಿದ್ದ ತರುಣರು. ಅವರು ಮಕ್ಕಳಿಗೆ ಓದಲು ಹಾಕಬೇಕೆಂಬ ಪ್ರಜ್ಞೆಯಿಂದ ಕುವೆಂಪು ಅವರನ್ನು ತೀರ್ಥಹಳ್ಳಿಯ ಪ್ರಾಥಮಿಕ ಶಾಲೆಗೆ ಸೇರಿಸಿದರು. ಒಂದು ಬಾಡಿಗೆಯ ಮಳಿಗೆ ಕೋಣೆ ಮಾಡಿದ್ದರು. ಅವರು ಅಲ್ಲಿ ಎ. ವಿ ಸ್ಕೂಲ್ ಎಂಬ ಮಾಧ್ಯಮಿಕ ಶಾಲೆಯಲ್ಲಿ ಅಭ್ಯಾಸ ಮಾಡಿದರು. (ಎ.ವಿ. ಎಂದರೆ ಆ್ಯಗ್ಲೋ ವರ್ನಾಕ್ಯುಲರ್). ತೀರ್ಥಹಳ್ಳಿಯ ಬಾಡಿಗೆ ಮನೆಯಲ್ಲಿ ಮೋಸೆಸ್ ಮೇಷ್ಟರು ಅವರಿಗೆ ಮನೆಪಾಠ ಹೇಳಿಕೊಡುತ್ತಿದ್ದರು. ಏಳೆಂಟು ಜನ ಹುಡುಗರನ್ನು ನೋಡಿಕೊಳ್ಳಲು ಅಡಿಗೆ ಮಾಡಲು ಒಬ್ಬ ಅಮ್ಮ, ಒಬ್ಬ ಆಳು ಇದ್ದರು.

ಕಾಡು ಹಳ್ಳಿಯ ಬಾಲಕರಾದ ಅವರು ತನ್ನ ತೀರ್ಥಹಳ್ಳಿ ಪಟ್ಟಣದ ಸಹಪಾಠಿಗಳಿಗೆ ಹುಲಿಯ, ಹಂದಿಯ, ಕಾಡಿನ, ಕೋವಿಯ ಕಥೆ ಹುಟ್ಟಿಸಿಕೊಂಡು ಹೇಳುತ್ತ–ಬಾಲ್ಯದಿಂದಲೇ ಕಥೆ ಹೇಳುವ ಕಲೆ ರೂಢಿಸಿಕೊಂಡಿದ್ದರು. ಅವರು ಅಲ್ಲಿ ಓದುವಾಗ ಕುಶಾವತಿ ಹೊಳೆಯಲ್ಲಿ ಈಜು ಕಲಿತರು. ಫುಟ್‌ಬಾಲ್, ಕ್ರಿಕೆಟ್, ಬ್ಯಾಡ್‌ಮೆಂಟನ್, ಗೋಲಿ, ಚಿಣ್ಣಿದಾಂಡು, ಬುಗುರಿ, ಚಕ್ರ ಬಿಡುವ ಆಟ, ಚಾಟರ ಬಿಲ್ಲಿನಲ್ಲಿ ಹಕ್ಕಿಗೊ ಅಳಲಿಗೊ ಗುರಿಯಿಟ್ಟು ಹೊಡೆಯುವುದರಲ್ಲಿ ಬಾಲ್ಯ ಕಳೆದರು.

ಅವರು ತೀರ್ಥಹಳ್ಳಿಯ ಎ. ವಿ ಸ್ಕೂಲಿನಲ್ಲಿ ಓದುತ್ತಿದ್ದಾಗ ವಿದ್ಯಾರ್ಥಿಗಳು ಷೇಕ್ಸ್‌ಪಿಯರ್ ಮಹಾಕವಿಯ 'ದಿ ಮರ್ಚೆಂಟ್ ಆಫ್ ವೆನಿಸ್' ನಾಟಕವನ್ನು ಮೂಲ ಇಂಗ್ಲಿಷ್‌ನಲ್ಲಿ ಆಡಿದರು. ಬಂದ ಹಣವನ್ನು ಮೊದಲನೆ ವಿಶ್ವಯುದ್ಧ



ನಿಧಿಗೆ ಕಳುಹಿಸಿದ್ದರು. ಕುವೆಂಪು ಅವರು ಆ ನಾಟಕದಲ್ಲಿ ಮುಖ್ಯ ಪಾತ್ರವಾದ ಷೈಲಾಕ್ ಆಗಿ ನಟಿಸಿದ್ದರು.

ತೀರ್ಥಹಳ್ಳಿಯಲ್ಲಿ ಬಾಡಿಗೆಗೆ ತೆಗೆದುಕೊಂಡಿದ್ದ ಹುಲ್ಲು ಮನೆಯಲ್ಲಿ ಅವರ ತಂದೆ ವೆಂಕಟಪ್ಪ ಗೌಡರು ತೀರಿ ಹೋದಾಗ ವಿದ್ಯಾರ್ಥಿ ಪುಟ್ಟಪ್ಪ ಏನೂ ಅರಿಯದ ಬಾಲಕರಾಗಿದ್ದರು.

ಲೋವರ್ ಸೆಕೆಂಡರಿ ಶಾಲೆಯಲ್ಲಿ ವರ್ಡ್ಸ್‌ವರ್ತ್ ಕವಿಯ 'ವಿ ಆರ್ ಸೆವೆನ್' ಕಂಠಪಾಠ ಮಾಡಿದ್ದರೂ ಅದು ಅರ್ಥವಾದದ್ದು ಮೈಸೂರಿಗೆ ಹೋಗಿ ಅವರಲ್ಲಿಯೂ ಕವಿತಾ ಸ್ಫೂರ್ತಿ ಸೆಲೆಯೊಡೆದ ಮೇಲೆ ಎಂದು ತಿಳಿಸಿದ್ದಾರೆ.

ಕುವೆಂಪು ಅವರು ಪ್ರಾಥಮಿಕ ಶಿಕ್ಷಣ ಪೂರೈಸಿ ಮಾಧ್ಯಮಿಕಕ್ಕೆ ಸೇರುವಾಗ ಸಂಸ್ಕೃತವನ್ನು ಆಯ್ಕೆ ಮಾಡಿಕೊಂಡರು. ಬ್ರಾಹ್ಮಣ ಮಿತ್ರರು 'ಶೂದ್ರರಿಗೆ ಯಾಕೊ ಸಂಸ್ಕೃತ?' ಎಂದು ಅಣಕವಾಡಿದರು. ಸಂಸ್ಕೃತ ಶಿಕ್ಷಕರು ಸಂಸ್ಕೃತ ಅಕ್ಷರವನ್ನು ಕಲಿಸದೆ, 'ಶೂದ್ರ ಮಕ್ಕಳಿಗೆ ಬಾಯಿ ತಿರುಗುವುದೇ ಇಲ್ಲ' ಎಂದು ಖಂಡಿಸಿ ಅವಮಾನಿಸಿದರು. ಅವರು ಆಗ 'ಹಾಳು ಸಂಸ್ಕೃತ ಹಾಳಾಗ' ಎಂದು ಕನ್ನಡ ತರಗತಿಗೆ ಸೇರಿದರು. ಅದು ಅಂದಿನ ವರ್ಣ ವ್ಯವಸ್ಥೆಯ ಕ್ರೂರತೆಯನ್ನು ಪರಿಚಯಿಸುತ್ತದೆ.

ಅವರ ಓರಗೆಯವರಾಗಿ ಅದೇ ಸ್ಕೂಲಿನಲ್ಲಿ ಓದುತ್ತಿದ್ದವರು ಡಿ.ಆರ್. ವೆಂಕಟಯ್ಯ ಮತ್ತು ಡಿ.ಎನ್. ಹಿರಿಯಣ್ಣ. ದೇವಂಗಿಯವರು ಮಕ್ಕಳನ್ನು ಓದಿಸಲು ಸ್ಕೂಲಿನ ಎದುರಿಗೆ ಸ್ವಂತ ಮನೆ ಕಟ್ಟಿಸಿದ್ದರು.

ಹಿರಿಯರು ಕದಿನಿ ಹಾರಿಸುವುದನ್ನು ನೋಡಿದ್ದ ಕುವೆಂಪು ಮತ್ತು ಮಾನಪ್ಪ ವಾಟೆಯ ಕೊಳವಿಗೆ ಕೋವಿ ಮಸಿ ಹಾಕಿ ಸಿಡಿಸಿದರು. ಆಗ ಕುವೆಂಪು ತನ್ನ ಎಡ ಅಂಗೈ ಸುಟ್ಟು ಕರ್‍ರಗಾಗಿಸಿಕೊಂಡದ್ದು ಅವರ ಬಾಲ್ಯದ ಪ್ರಯೋಗಾತ್ಮಕ ನಡೆಯನ್ನು ಪರಿಚಯಿಸುತ್ತದೆ.

ತೀರ್ಥಹಳ್ಳಿಯಲ್ಲಿ ವಿದ್ಯಾರ್ಥಿಯಾಗಿದ್ದಾಗ 'ಇನ್‌ಫ್ಲೂಯನ್‌ಜಾ' ರೋಗಕ್ಕೆ ಜನ ಬಲಿಯಾದದ್ದನ್ನು ಪುಟ್ಟಪ್ಪ ಕೇಳಿ ನೋಡಿದರು. ಆ ಸಮಯದಲ್ಲಿ ಐಯ್ಯಪ್ಪಗೌಡರು ಮತ್ತು ಚಿಕ್ಕಪ್ಪ ಕುಪ್ಪಳಿ ಪಟೇಲ್ ರಾಮೇಗೌಡರು ಹಳ್ಳಿ ಹಳ್ಳಿ ಸುತ್ತಿ ರೋಗಿಗಳ ಸೇವೆ ಮಾಡುತ್ತಿದ್ದುದನ್ನು ಕಂಡರು. ಆ ಸೇವಾ ಮನೋಭಾವ ಅವರ ಬಾಲ ಮನಸ್ಸನ್ನು ಸಮಾಜ ಸೇವೆಗೆ ತುಡಿಯುವಂತೆ ಮಾಡಿತು.

ಆಂಗ್ಲೇಯ ರೀತಿಯ ಸ್ಕೂಲು ಪ್ರಾರಂಭವಾದಾಗ ಬ್ರಾಹ್ಮಣರು ಅವುಗಳು ತಮಗೇ ಮೀಸಲೆಂದು ವರ್ತಿಸುತ್ತಿದ್ದರು. ವಿದ್ಯಾರ್ಥಿ ಪುಟ್ಟಪ್ಪ ಅದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಬ್ರಾಹ್ಮಣ, ಶೂದ್ರ, ಹೊಲೆಯ ಎಂದು ಜಾತಿಯ ಕಾರಣದಿಂದ ನಡೆದುಕೊಳ್ಳುವ ಜನರ ವರ್ತನೆ ಅವರಿಗೆ ಹಿಡಿಸುತ್ತಿರಲಿಲ್ಲ. ಅದನ್ನು ವಿರೋಧಿಸುತ್ತ ಬೆಳೆದ ಅವರು ಪೂರ್ಣ ಜಾತ್ಯತೀತ ವ್ಯಕ್ತಿಯಾಗಿ ರೂಪುಗೊಂಡರು.

ಅವರು ಲೋವರ್ ಸೆಕೆಂಡರಿ ಪರೀಕ್ಷೆ ಬರೆಯಲು ಐಯ್ಯಪ್ಪ ಚಿಕ್ಕಪ್ಪಯ್ಯನೊಡನೆ ಎತ್ತಿನ ಕಮಾನುಗಾಡಿಯಲ್ಲಿ ಎರಡು ದಿನ ಪ್ರಯಾಣಿಸಿ ಜಿಲ್ಲಾ ಕೇಂದ್ರ ಶಿವಮೊಗ್ಗಕ್ಕೆ ಬಂದಿದ್ದರು. ಆ ಪರೀಕ್ಷೆ ಅವರಿಗೆ ಪುಟ್‌ಬಾಲ್ ಆಟದಲ್ಲಿ ಭಾಗವಹಿಸಿದಂತಿತ್ತು. ಆ ಕ್ರೀಡಾ ಮನೋಭಾವ ವಿದ್ಯಾರ್ಥಿಗಳಲ್ಲಿರುವುದು ಉತ್ತಮ. ಅವರ ಜೊತೆಗೆ ಪರೀಕ್ಷೆ ಬರೆದ ಇತರರು: ದೇವಂಗಿ ವೆಂಕಟಯ್ಯ, ಹಿರಿಯಣ್ಣ, ಸೀತಮ್ಮ, ಕೂಡಿಗೆ ಗುರಪ್ಪ. ಶಿವಮೊಗ್ಗದಲ್ಲಿ ನೋಡಿದ ರೈಲು ಅವರು ಕಂಡ ಮೊತ್ತಮೊದಲ ಪಾಶ್ಚಾತ್ಯ ವಿಜ್ಞಾನದ ಮಹಿಮೆಗೆ ತೆರೆದ ಬೆಳಕಂಡಿಯಾಗಿತ್ತು.

ಕನ್ನಡ ಲೋವರ್ ಸೆಕೆಂಡರಿ ಕಟ್ಟಿದ ಕುವೆಂಪು ಮತ್ತು ಸೀತಮ್ಮ ಉತ್ತೀರ್ಣರಾದರು. ಇಂಗ್ಲಿಷ್ ಭಾಷೆ ಸೇರಿದಂತೆ ಕಟ್ಟಿದ ಇತರರು ಅನುತ್ತೀರ್ಣರಾಗಿದ್ದರು. ಆ ಬಾಲ್ಯದ ಅನುಭವವೇ ಅವರನ್ನು ಇಂಗ್ಲಿಷ್ ಕಡ್ಡಾಯವಾಗಿ ಹೇರಬೇಡಿ ಎಂದು ಸದಾ ಹೇಳುವಂತೆ ಮಾಡಿತು.



ಬೇಸಿಗೆ ರಜೆಯಲ್ಲಿ ಕುಪ್ಪಳಿಯಲ್ಲಿ ಸ್ನೇಹಿತರೊಂದಿಗೆ 'ಆಮ್ಚ್-ಅಲಿಚ್' ಆಟ ಆಡುವಾಗ ಎಡತೋಳಿನ ನಡುವಣ ಸಂದು ಮುರಿದು ಹಿಂದಕ್ಕೆ ಬಾಗಿತು! ಆಗ ಅವರ ತಾಯಿ ಸೀತಮ್ಮ ಮಗನಿಗೆ ಹೀಗಾಯಿತೆಂದು ತುಳಸೀಕಟ್ಟೆಗೆ ತಲೆ ಚಚ್ಚಿಕೊಂಡರಂತೆ. ಆ ಸಂದರ್ಭವನ್ನು ಕುವೆಂಪು 'ಮಾತೃಭಕ್ತಿಯ ಚಿತ್ತಪಶ್ಯಕ್ತಿಗೆ ಜಾಗ್ರೃತವಾದ ಈಶ್ವರೀ ಕೃಪೆ ಅತೀತದಿಂದ ಇಳಿದು ಬಂದು ನನ್ನ ಶಿರಸ್ಸಿನ ಮೇಲೆ ಆಶೀರ್ವಾದ ಮುದ್ರೆಯಾಗಿ ನಿಂತದ್ದು ಅಂದಿನಿಂದ ಇಂದಿನವರೆಗೂ ಬಿಡದೆ ಕೈ ಹಿಡಿದು ನಡೆಸಿ ಕಾಯುತ್ತಿದೆ!' ಎಂದು ತಾಯಿಯ ಪ್ರಾರ್ಥನಾ ಫಲವನ್ನು ನೆನೆದಿದ್ದಾರೆ (ನೆ.ದೋ. ಪು 110). ತಾಯಿ ಸೀತಮ್ಮನವರ ದೇವರ ಬಗೆಗಿನ ಭಾವನಾತ್ಮಕ ವರ್ತನೆಯಿಂದಲೆ ಅವರ ಬಾಲಕ ಪ್ರಜ್ಞೆಗೆ ಭಗವದ್ ವಿಷಯಕವಾದ ಶ್ರದ್ಧೆ ಮತ್ತು ಪೂಜ್ಯ ಬುದ್ಧಿಯುಂಟಾಗಿತ್ತು.

## 'ಲಾಂಗ್‌ಫೆಲೊ' ಕವಿಯ ಕವನ: ಪ್ರಥಮ ದೀಕ್ಷಾಗುರು

ಹೊಸಮನೆ ಮಂಜಪ್ಪಗೌಡರು ಕ್ರೈಸ್ತ ಪಾದ್ರಿಗಳ ಪ್ರಭಾವದಿಂದ ಮೈಸೂರಿನ ಹಾರ್ಡ್ವಿಕ್ ವಿದ್ಯಾ ಸಂಸ್ಥೆಯಲ್ಲಿದ್ದು ಎಸ್. ಎಸ್. ಎಲ್. ಸಿ. ವರೆಗೂ ಓದಿ ಬಿಟ್ಟು ಬಂದಿದ್ದರು. ಕುವೆಂಪು ವಿದ್ಯಾಭ್ಯಾಸಕ್ಕಾಗಿ ತೀರ್ಥಹಳ್ಳಿಯಲ್ಲಿ ದೇವಂಗಿಯವರ ಮನೆಯಲ್ಲಿ ತಾಯಿ ಮತ್ತು ಇಬ್ಬರು ತಂಗಿಯರೊಡನೆ ಇದ್ದರು. ಅವರ ಮನೆಗೆ ಬಂದು ಇಳಿದುಕೊಂಡಿದ್ದ ವಿದ್ಯಾವಂತ, ಸುಸಂಸ್ಕೃತ ಮಂಜಪ್ಪಗೌಡರು ಕುವೆಂಪು ಅವರ ತಾಯಿಗೆ ಮಗನನ್ನು ಮೈಸೂರಿನಲ್ಲಿ ಓದಿಸಲು ಹೇಳಿದರು. ಆ ವಿಚಾರವಾಗಿ ಯಜಮಾನರಾದ ಕುಪ್ಪಳಿ ರಾಮಣ್ಣಗೌಡರಿಗೆ ಹೇಳಿ, ತನ್ನ ತಮ್ಮನ ಜೊತೆ ಕಳಿಸುವಂತೆ ಮಾಡುವೆ ಎಂದು ತಿಳಿಸಿದರು.

ಒಮ್ಮೆ ಅವರ ಜೊತೆ ಬಾಲಕ ಕುವೆಂಪು–ಇಂಗ್ಲಾದಿಗೆ ನೀರವ ನಿಸರ್ಗ ಮನೋಹರ ಕಾಡಿನಲ್ಲಿ ಹೋಗುತ್ತಿದ್ದರು. ಆಗ ಆ ಹಿರಿಯರು 'ಮೈಸೂರಿನ ವಿಚಾರ, ವಿದ್ಯಾಭ್ಯಾಸದ ವಿಚಾರ, ವಿದ್ಯೆಯಿಂದೊದಗುವ ಏಳ್ಗೆಯ ವಿಚಾರ, ಗ್ರಂಥಗಳಿಂದ ನಮ್ಮ ಚೇತನ ವಿಕಾಸಗೊಂಡು ನಮಗುಂಟಾಗುವ ಅಭ್ಯುದಯ'

ತಿಳಿಸಿದ್ದರು. ಅವರು 'ಲಾಂಗ್ ಫೆಲೊ' ಕವಿಯ 'ದಿ ಸಾಮ್ ಆಫ್ ಲೈಫ್' ಕವನ ಕಂಠಪಾಟ ಮಾಡಿದ್ದು ಅದನ್ನು ಹೇಳಿ ವಿವರಿಸಿದರು. ಅದನ್ನು ಕೇಳಿದ ಕುವೆಂಪು 'ಆಲಿಸುತ್ತಾ ಆಲಿಸುತ್ತಾ ನನ್ನ ಜೀವನ ಜ್ವಾಲಾಮಯವಾಯ್ತು, ನನ್ನ ಅಂತಃಶ್ಚೇತನಕ್ಕೊಂದು ಮೊತ್ತ ಮೊದಲನೆಯ 'ಉಪನಯನ'ವಾಯ್ತು! ಚೈತನ್ಯ ಕಣ್ಣು ಬಿಟ್ಟಿತು ಎಚ್ಚರಗೊಂಡು!... ನನ್ನ ಬಾಲ್ಯದ 'ಗುರು'ವಾಗಿ ನನ್ನ ಚೇತನಕ್ಕೆ ಕಣ್ದೆರೆಯಿಸಿದ ಈ ಕವನ ನನ್ನ ಪ್ರಥಮ ದೀಕ್ಷಾಗುರುವಾಗಿ ನಿಂತಿದೆ' (ನೆ.ದೋ. ಪು 118) ಎಂದು ದಾಖಲಿಸಿದ್ದಾರೆ.

Tell me not, in mournful numbers,
'Life is but an empty dream!'
For the soul is dead that slumbers
And things are not what they seem.

Life is real! Life is earnest!
And the grave is not its goal;
'Dust thou art, to dust returnest,'
Was not spoken of the soul.

Trust no Future, however pleasant!
Let the dead past bury its dead!
Act-act in the living present!
Heart within, and God O'erhead!

Lives of great men all remind us
We can make our lives sublime,
And, departing, leaves behind us
Footprints on the sands of time.



ಕುವೆಂಪು ಅವರು "ಇಂಗ್ಲಿಷಿನವರು ಇಂಡಿಯಾಕ್ಕೆ ಬರದಿದ್ದರೆ ನಾನು ಕುಪ್ಪಳಿಯಲ್ಲಿ ಸಗಣಿ ತಟ್ಟಿಕೊಂಡು, ಬ್ರಾಹ್ಮಣರ ಗದ್ದೆ ಉತ್ತುಕೊಂಡಿರುತ್ತಿದ್ದೆ. ಅವರೊಡನೆ ಕ್ರೈಸ್ತ ಮಿಷನರಿಗಳು ಬರದೆ ಇದ್ದಿದ್ದರೆ ನಾನು ಶ್ರೀ ರಾಮಾಯಣದರ್ಶನಂ ಬರೆದ ಕವಿಯಾಗುತ್ತಿರಲಿಲ್ಲ. ವೈದಿಕರ ಮತಮೌಢ್ಯದ ಕೆಸರುಸುಬಿನಲ್ಲಿ ಒದ್ದಾಡುವ ಮೂಢ ಶೂದ್ರ ಹಂದಿಯಾಗಿರುತ್ತಿದ್ದೆ!" ಎಂದು ಒಂದು ಸಂದರ್ಶನದಲ್ಲಿ ಹೇಳಿದ್ದಾರೆ.[2]

* * *

2. ಕುವೆಂಪು ಸಮಗ್ರ ಗದ್ಯ ಸಂಪುಟ – 2. ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ, 2013, ಪು–584.




# ಪ್ರೌಢಶಾಲಾ ವಿದ್ಯಾರ್ಥಿ

**ಮೈಸೂರಿನಲ್ಲಿ ಹೈಸ್ಕೂಲು ವಿದ್ಯಾಭ್ಯಾಸ, ಗ್ರಂಥಾಲಯದಲ್ಲಿ ಜ್ಞಾನದಾಹಿ**

ಕುವೆಂಪು 1919ರಲ್ಲಿ ಮೈಸೂರಿನಲ್ಲಿ ವೆಸ್ಲಿಯನ್ ಮಿಶನ್ ಹೈಸ್ಕೂಲ್‌ಗೆ ಸೇರಿದರು. ತಮ್ಮ ಸಂಬಂಧಿಗಳಾದ ಹೊಸಮನೆ ರಾಮಪ್ಪ, ಗೋವಿನಹಳ್ಳಿ ರಾಮಪ್ಪ ಅವರ ಜೊತೆ ರೂಮು ಮಾಡಿಕೊಂಡು ಹೋಟೆಲ್‌ನಲ್ಲಿ ಊಟ ಮಾಡುತ್ತ ವಿದ್ಯಾಭ್ಯಾಸ ನಡೆಸಿದರು.

ಅವರು ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ ಅವರ ಸಾಹಿತ್ಯಕ ಜೀವನದ ಮೇಲೆ ಪ್ರಭಾವ ಉಂಟು ಮಾಡಿದ್ದು ಇಂಗ್ಲಿಷ್. ಕನ್ನಡ ಒಂದು ಭಾಷಾ ವಸ್ತು ಮಾತ್ರವಾಗಿತ್ತು. ಅವರು ಕೊಂಡ ಇಂಗ್ಲಿಷ್ ಪಠ್ಯ ಪುಸ್ತಕ ಪ್ರಿಚರ್ಡ್‌ನ 'ಸ್ಟಡೀಸ್ ಇನ್‌ಲಿಟರೇಚರ್,' ಸ್ಕಾಟ್ ಕವಿಯ 'ಲೇಡಿ ಆಪ್ ದಿ ಲೇಕ್' ಗಳನ್ನು ಓದಿ, ನಿಘಂಟಿನ ಸಹಾಯದಿಂದ ತಿಳಿದು ಮುಂದುವರಿಯುತ್ತಿದ್ದರು. ಪ್ರಿಚರ್ಡ್ ಪುಸ್ತಕದಲ್ಲಿಯ 'Footprints on The Sand!' ಓದಿ 'ರಾಬಿನ್ ಸನ್ ಕ್ರೂಸೊ' ಪುಸ್ತಕ ಪೂರ್ತಿ ಓದಲು ಆಸಕ್ತಿ ಹೊಂದಿದರು. ಅದರ ಲೇಖಕ ಡಾನಿಯೇಲ್ ಡೀಫೊ. ಆ ಪುಸ್ತಕ ಎಲ್ಲಿ ಸಿಗುತ್ತದೆ ಎಂದು ವಿಚಾರಿಸಿದರು.

ಹಿರಿಯ ಮಿತ್ರರು ತಿಳಿಸಿದಂತೆ ಪಬ್ಲಿಕ್ ಲೈಬ್ರರಿಗೆ ಹೋಗಿ ಅಲ್ಲಿಯ ಬೀರುಗಳಲ್ಲಿಯ ಪುಸ್ತಕಗಳನ್ನು ನೋಡಿ ಬೆರಗಾದರು. The Life and Adventures of Robinson crusoe by Daniel Defoe ಹೆಬ್ಬೊತ್ತಗೆಯನ್ನು ಅಟೆಂಡರ್‌ನಿಂದ ಪಡೆದು ಓದಿದರು. ಲೈಬ್ರರಿಯ ಯಾರೂ ಇರದ ಜಾಗದಲ್ಲಿ ಕುಳಿತು ಓದುತ್ತಿದ್ದರು. ಸಂಜೆ ಐದು ಗಂಟೆಗೆ ಕ್ಲಾಸ್ ಬಿಟ್ಟ ಕೂಡಲೇ ಹೋಗಿ ಲೈಬ್ರರಿ ಮುಚ್ಚುವ ಸಮಯ ರಾತ್ರಿ ಒಂಬತ್ತರವರೆಗೆ ಓದುತ್ತಿದ್ದರು.



ಅವರು ಓದುತ್ತಾ ಕುಳಿತಿರುತ್ತಿದ್ದುದನ್ನು ನೋಡಿ ಗ್ರಂಥಪಾಲಕ ಮತ್ತು ಅಟೆಂಡರ್ ಬೇಗ ಬಾಗಿಲು ಮುಚ್ಚಲು ಆಗುತ್ತಿರಲಿಲ್ಲ. ಅಟೆಂಡರ್ ಅವರ ಕೈಯಿಂದ ಪುಸ್ತಕವನ್ನು ಕಸಿದುಕೊಂಡು ಹೋಗುವವರೆಗೂ ಅವರು ಓದುತ್ತಿದ್ದರು! ರಜಾ ದಿನಗಳಲ್ಲಿ ಬೆಳಿಗ್ಗೆ ಸಾಯಂಕಾಲ ಎರಡೂ ಹೊತ್ತು ಧಾವಿಸಿ ಹೋಗಿ, ಅಲ್ಲಿದ್ದ ಇಂಗ್ಲಿಷ್ ಸಾಹಿತ್ಯ ಕೃತಿಗಳನ್ನು ಓದುತ್ತಿದ್ದರು. ಬೆಳಿಗ್ಗೆ ಲೈಬ್ರರಿ ಬಾಗಿಲು ತೆರೆಯುವ ಮುನ್ನವೇ ಹೋಗಿ ಕಾಯುತ್ತಿದ್ದರು.

ಅವರು ಹಾಗೆ ಜ್ಞಾನದಾಹದಿಂದ ಓದುತ್ತಿದ್ದಾಗ ಅಲ್ಲಿ 'ನನಗೆ ನನ್ನ ಜೀವನದ ದಿಕ್ಕನ್ನೆ ತಿರುಗಿಸಿ, ನನ್ನ ಬದುಕನ್ನೆಲ್ಲ ಮರ್ತ್ಯದಿಂದ ಅಮರ್ತ್ಯಕ್ಕೆತ್ತಿ ಬೀಸಿದ ಭಗವತ್ ಕೃಪಾ ಹಸ್ತರೂಪದ ಶ್ರೀರಾಮಕೃಷ್ಣ-ವಿವೇಕಾನಂದ ವಿಷಯಕವಾದ ಕೃತಿ ದರ್ಶನವಾದದ್ದು!' ಎಂದು ತಿಳಿಸಿದ್ದಾರೆ.

ಆ ಬಗೆಯ ಓದುವ ಆಸಕ್ತಿಯನ್ನು ವಿದ್ಯಾರ್ಥಿಗಳು ಬೆಳೆಸಿಕೊಂಡರೆ, ಪ್ರತಿಯೊಬ್ಬರೂ ಜ್ಞಾನಪರ್ವತರಾಗುವುದರಲ್ಲಿ ಸಂಶಯವಿಲ್ಲ.

## ಖಾದಿ ಬಟ್ಟೆ ತೊಡುವ ವ್ರತ

1920ರಲ್ಲಿ ಹೈಸ್ಕೂಲಿನ ಮೊದಲನೆಯ ವರ್ಷದ ವಿದ್ಯಾರ್ಥಿಯಾಗಿದ್ದಾಗ ಬ್ರಿಟೀಷರನ್ನು ಓಡಿಸಬೇಕೆಂಬ ಸಂಕಲ್ಪದ ವಿದ್ಯಾರ್ಥಿ ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಉತ್ತರ ಭಾರತದ ಗೌರಿಶಂಕರರ ಭಾಷಣದ ನಂತರ ವಿದೇಶ ವಸ್ತ್ರ ದಹನ ನಡೆಯಿತು. ಕುವೆಂಪು ಅಂದು ಹೊಸದಾಗಿ ಕೊಂಡಿದ್ದ ಪೆಲ್ಟ್ ಕ್ಯಾಪ್ ಮತ್ತು ಕೋಟುಗಳನ್ನು ಬೆಂಕಿಗೆ ಎಸೆದರು. ಅಂದಿನಿಂದ ಗಾಂಧಿ ಟೋಪಿ ಮತ್ತು ಖಾದಿ ಬಟ್ಟೆ ತೊಡುವ ವ್ರತ ತೊಟ್ಟರು. ಅವರು ಸದಾ ಖಾದಿ ಉಡುಪು ಧರಿಸುತ್ತಿದ್ದರು.

ಅವರ ವಿದ್ಯಾರ್ಥಿ ಚೇತನವು ಮಹಾತ್ಮಾ ಗಾಂಧಿಯವರ ಸ್ವಾತಂತ್ರ್ಯ ಹೋರಾಟ ಹಾಗೂ ಅನೇಕ ಪ್ರಭಾವಗಳಿಂದ ದೀಪ್ತವಾಯಿತು. ಅವರಿಗೆ ಪ್ರಾಚ್ಯ ಪಾಶ್ಚಾತ್ಯಗಳೆರಡೂ ಆರಾಧ್ಯವಾದವು.

## ಪ್ರತಿದಿನ ಎರಡು ಇಡ್ಲಿ ತಿಂದು ಒಂದು ವಾರ ಕಳೆದುದು

ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುವಾಗ ಹೈಸ್ಕೂಲ್‌ನ ಮೊದಲನೆ ವರ್ಷದಲ್ಲಿ ಮನೆಯಿಂದ ಹಣ ಬರುವುದು ತಡವಾಯಿತು. ಆಗ ಇದ್ದ ಹಣದಲ್ಲಿ ಪ್ರತಿದಿನ ಎರಡು ಇಡ್ಲಿ ತಿಂದು ಒಂದು ವಾರ ಕಳೆದರು. ಆಗ ಅವರ ಆ ಸ್ಥಿತಿ ತಿಳಿದು ಸಹಾಯ ಮಾಡಿದ ತೀರ್ಥಹಳ್ಳಿ ಪ್ರೈಮರಿ ಸ್ಕೂಲ್ ಮೇಷ್ಟ್ರು ಮಂಜುನಾಥಯ್ಯ. 'ಅವರು ಅವಿಸ್ಮೃತ ಅವರಿಗೆ ಮಂಗಳವಾಗಲಿ, ಶಾಂತಿ ದೊರೆಯಲಿ!' ಎಂದು ಕುವೆಂಪು ತಮ್ಮ ಇಳಿವಯಸ್ಸಿನಲ್ಲಿ ನೆನೆದಿದ್ದಾರೆ.

ಕುವೆಂಪು ಅವರಿಗೆ ಪೇಟೆ ಜೀವನದ ಕೊಳಕು ಬೆಳಕು ಸಾಕಷ್ಟು ಆಗಿತ್ತು. ಅವರು ಕೊಳಕಿನಿಂದ ದೂರವಾಗಿ ಬೆಳಕಿನ ಪಥದಲ್ಲಿ ಸಾಗಿ ಮಹಾಕವಿಯಾದರು.

## ಪ್ರಥಮ ಯಶಸ್ವಿ ಬೇಟೆ

ಕುವೆಂಪು ಅವರು ಹಳ್ಳಿಗೆ ರಜಾ ಕಾಲದಲ್ಲಿ ಹೋದಾಗ ಅಲ್ಲಿಯವರ ಬಾಳಿನ ನಾನಾ ಸಂಗತಿಗಳಲ್ಲಿ ಒಂದಾಗಿ ನಡೆಯುತ್ತಿದ್ದರು. ಬೇಟೆಯಾಡುವುದು, ಹೊಂಡ ತೋಣಕುವುದು, ಕೆರೆಗೆ ಬಲೆ ಹಾಕಿ ಮೀನು ಹಿಡಿಯುವುದು, ಮರಸು ಕೂರುವುದು, ಕೂಣೆ ಹಾಕುವುದು ಮಾಡುತ್ತಿದ್ದರು. ಮನೆಯಲ್ಲಿ ಅಣ್ಣ ತಮ್ಮ ತಂಗಿಯರೊಡನೆ ಆಡುತ್ತಿದ್ದರು. ತಾನು ಓದಿದ ಇಂಗ್ಲಿಷ್ ಪುಸ್ತಕದ ಕಥೆ ಕವಿತೆಗಳನ್ನು ಹೇಳುತ್ತಿದ್ದರು. ಪುಟ್ಟಣ್ಣನೊಡಗೂಡಿ ಕೋವಿ ಹಿಡಿದು ನಾಯಿಯನ್ನು ಕರೆದುಕೊಂಡು ಕಾಡುಮಲೆಗಳಲ್ಲಿ ಹಗಲೂ ಬೈಗು ಅಲೆದಾಡುತ್ತಿದ್ದರು.

ಒಮ್ಮೆ ಅವರು ಅಡುಗೆ ಮನೆಯ ಒಲೆಸರದ ನಾಗಂದಿಗೆ ಮೇಲೆ ದೊಡ್ಡ ತೊಲೆಯ ಬಳಿ ಇಟ್ಟಿದ್ದ ಕೇಪಿನ ಕೋವಿ ತೆಗೆದುಕೊಂಡರು. ಮಾನಪ್ಪನೊಡಗೂಡಿ 'ಕವಿಶೈಲ'ದ ಗಿರಿನೆತ್ತಿಗೆ ಹೋಗಿ ಚಲಿಸುವ ಮೊಲದ ಬೇಟೆ ಆಡಿದ್ದರು. ಅದು ಅವರ ಪ್ರಥಮ ಯಶಸ್ವಿ ಪ್ರತಿಭಾಪೂರ್ಣ ಬೇಟೆ. ಹಿರಿಯರು ಈಡುಗಾರಿಕೆಗೆ ಶಹಬಾಸ್ ಹೇಳಿದ್ದರು.



### ‘ಬೊಮ್ಮನಹಳ್ಳಿಯ ಕಿಂದರಿಜೋಗಿ’ ರಚನೆಗೆ ಪ್ರೇರಣೆ

ಕುವೆಂಪು ಹೈಸ್ಕೂಲಿನ ಎರಡನೆಯ ವರ್ಷದಲ್ಲಿದ್ದಾಗ ಮೇಷ್ಟ್ರು ಶ್ರೀ ಸುಂದರ ಅವರು ಬ್ರೌನಿಂಗ್ ಕವಿಯ ‘ಪೈಡ್ ಪೈಪರ್ ಆಫ್ ಹ್ಯಾಮಲಿನ್’ ಅನ್ನು ನಾಟಕೀಯವಾಗಿ ಓದಿ ವಿವರಿಸಿದರು. ಅದು ಬಾಲಕ ಚೇತನಗಳಿಗೆ ಕಚುಗುಳಿಯಿಟ್ಟು ನಗಿಸುವ ಹಾಸ್ಯದಿಂದ ಕೂಡಿತ್ತು. ಅದು ಬಾಲಕ ಕುವೆಂಪು ಅವರ ಭಾವಕೋಶ ಪ್ರವೇಶಿಸಿತು. ಅವರು ಅದನ್ನು ಆಧರಿಸಿ ರೂಪಾಂತರಗೊಂಡ ‘ಬೊಮ್ಮನಹಳ್ಳಿಯ ಕಿಂದರಿಜೋಗಿ’ ಕಥನ ಕವನವನ್ನು 1926ರಲ್ಲಿ ಶಿವಮೊಗ್ಗೆಯಲ್ಲಿ ರಚಿಸಿದರು.

### ವಿದ್ಯಾರ್ಥಿವೇತನದ ಹಣ ಪುಸ್ತಕ ಕೊಳ್ಳಲು ವಿನಿಯೋಗ

ಶ್ರೀ ಸುಂದರ ಮೇಷ್ಟ್ರು ತರಗತಿಯಲ್ಲಿ ರವೀಂದ್ರನಾಥ ಠಾಕೂರರ ‘ಗೀತಾಂಜಲಿ’ ಬಗ್ಗೆ ಹೇಳಿ, ಅವರಿಗೆ ನೊಬೆಲ್ ಬಹುಮಾನ ಬಂದ ವಿಷಯ ತಿಳಿಸಿದರು. ಅವರು ಆ ಕವನಗಳನ್ನು ರಸವತ್ತಾಗಿ ಅವುಗಳ ಕಾವ್ಯತ್ವ ಮತ್ತು ಅಧ್ಯಾತ್ಮಿಕತೆ ಹೃದಯ ಸ್ಪಂದಿಯಾಗುವಂತೆ ವಾಚಿಸಿದರು. ಅದು ವಿದ್ಯಾರ್ಥಿ ಕುವೆಂಪು ಅವರ ಸುಮಧುರ ಭಾವಲೋಕಕ್ಕೆ ಒಂದು ಗವಾಕ್ಷ ತೆರೆದಂತಾಗಿ, ಅವರ ಚೇತನ ರಸೋನ್ಮಾದಿಯಾಯಿತು.

ಅದೇ ದಿನ ಸಂಜೆ ಪಿ.ಟಿ.ಐ.ಬುಕ್ ಡಿಪೋಗೆ ಹೋಗಿ ‘ಗೀತಾಂಜಲಿ’ಯನ್ನು ಒಂದು ರೂಪಾಯಿ ಬೆಲೆ ಕೊಟ್ಟು ಕೊಂಡುಕೊಂಡರು. ಅದನ್ನು ಓದಿ ಅವರ ಚೇತನ ನಂದನದಲ್ಲಿ ನರ್ತಿಸಿ ನಲಿವ ಅಪ್ಸರೆಯಂತಾಯಿತು. ಅವರು ಆಗಲೇ ಓದಿಕೊಂಡಿದ್ದ ಶ್ರೀರಾಮಕೃಷ್ಣ–ವಿವೇಕಾನಂದರ ಅಧ್ಯಾತ್ಮಿಕ ಸೌಂದರ್ಯಕ್ಕೆ ಕಾವ್ಯಸೌಂದರ್ಯದ ದರ್ಶನ ದೀಪ್ತಿ ಸಂಗಮಿಸಿದಂತಾಯಿತು.

ಅವರಿಗೆ ಬರುತ್ತಿದ್ದ ಹಿಂದುಳಿದ ಪಂಗಡದ ವಿದ್ಯಾರ್ಥಿ ವೇತನದ ಹಣದಲ್ಲಿ ಪ್ರತಿ ತಿಂಗಳು ಪುಸ್ತಕ ಕೊಳ್ಳಲು ವಿನಿಯೋಗಿಸುತ್ತಿದ್ದರು. ಹಾಗೆ ಅವರು ಕೊಂಡ

ಪುಸ್ತಕಗಳು ರಾಬಿನ್‌ಸನ್ ಕ್ರೂಸೋ, ಷೇಕ್ಸ್‌ಪಿಯರ್ ನಾಟಕಗಳು, ಪ್ಯಾರಡೈಸ್ ಲಾಸ್ಟ್ ಮುಂತಾದವುಗಳು.

**ಇಂಗ್ಲಿಷ್ ಪದ್ಯ ರಚನೆಗೆ ಗುದ್ದಲಿ ಪೂಜೆ**

ಕುವೆಂಪು ಅವರಿಗೆ ಇಂಗ್ಲಿಷ್ ಪದ್ಯದ ಛಂದಸ್ಸಿನ ಪರಿಚಯ ಮಾಡಿಕೊಟ್ಟವರು ಹೆಡ್ ಮಾಸ್ಟರ್ ಸುಬ್ಬು ಕೃಷ್ಣಯ್ಯನವರು. ಅವರಿಗೆ ಸ್ಕಾಟ್ ಕವಿಯ 'ದಿ ಲೇಡಿ ಆಫ್ ದಿ ಲೇಕ್' ದೀರ್ಘ ಕಾವ್ಯದ ಮೊದಲ ಕ್ಯಾಂಟೊ ಪಠ್ಯವಾಗಿತ್ತು. ಅವರು ಇಡೀ ಪುಸ್ತಕ ಕೊಂಡುಕೊಂಡು ಅಧ್ಯಯನ ಮಾಡಿದರು! ನಾಲ್ಕು ಗಣದ ಅದರ ಛಂದಸ್ಸನ್ನು ಗತ್ತಿನಿಂದ ಪಠಿಸಿ, ಲಘು ಗುರು ಗುರುತಿಸಿದರು. ಅವರಿಗೆ ಛಂದಸ್ಸು ನೀರು ಕುಡಿದಷ್ಟು ಸುಲಭವಾಗಿ ಕೈ ಸೇರಿತು!

ಅವರ ಸಹಪಾಠಿಗೆ ಚರಿತ್ರೆಯ ಪಾಠ ಕಷ್ಟವೆನಿಸಿತ್ತು. ಆಗ ಅವರು ಗೆಳೆಯನಿಗೆ 'ಅಕ್ಬರ್ಸ್ ಟೂಂಬ್' 'ಔರಂಗ ಜೇಬ್ಸ್ ಟೂಂಬ್' ಎಂಬ ಚರಿತ್ರೆಯ ವಿಷಯವನ್ನು ಛಂದಸ್ಸಿನೊಡನೆ ಪ್ರಾಸಬದ್ಧವಾಗಿ ರಚಿಸಿ ಬಾಯಿಪಾಠ ಮಾಡಲು ನೀಡಿದರು. ಅವನು ಕಂಠಪಾಟ ಮಾಡಿ ಪರೀಕ್ಷೆಯಲ್ಲಿ ಪಾಸಾದ! ಅದು ಅವರು ಇಂಗ್ಲಿಷ್‌ನಲ್ಲಿ ಪದ್ಯ ರಚಿಸುವುದಕ್ಕೆ – ಪ್ರಾರಂಭದ ಗುದ್ದಲಿ ಪೂಜೆಯಾಯಿತು.

ಅವರು ಪರೀಕ್ಷೆಗೆ ಕಡ್ಡಾಯವಲ್ಲದ ಬೈಬಲ್‌ಅನ್ನು ನಿಷ್ಠೆಯಿಂದ ಓದುತ್ತಿದ್ದರು. ಅದನ್ನು ಶ್ರೀ ವಿವೇಕಾನಂದರ ಹಿಂದೂಧರ್ಮದ ಶಾಶ್ವತವಾದ ವೇದಾಂತ ದರ್ಶನ ಮತ್ತು ಶ್ರೀರಾಮಕೃಷ್ಣರ ಸರ್ವಧರ್ಮ ಸಮನ್ವಯ ತತ್ವಗಳಿಗೆ ಹೋಲಿಕೆ ಮಾಡಿಕೊಳ್ಳುತ್ತಿದ್ದರು. ದೀರ್ಘ ಉತ್ತರ ಬರೆಯುತ್ತ ಧರ್ಮಗಳ ಸೂಕ್ಷ್ಮವನ್ನು ಹೈಸ್ಕೂಲಿನಲ್ಲಿಯೇ ಸ್ಪಷ್ಟವಾಗಿ ತಿಳಿದವರಾಗಿದ್ದರು.

ಅವರು ಅಧ್ಯಯನ ನಿಷ್ಠೆಯಿಂದ ಎಸ್.ಎಸ್.ಎಲ್.ಸಿ ತರಗತಿಯಲ್ಲಿರುವಾಗಲೆ ಷೇಕ್ಸ್‌ಪಿಯರ್ ನಾಟಕಗಳನ್ನು, ಮಿಲ್ಟನ್ ಕವಿಯ ಪ್ಯಾರಡೈಸ್ ಲಾಸ್ಟ್ ಕಾವ್ಯವನ್ನು ಓದಲು ಸಮರ್ಥರಾಗಿದ್ದರು. ಹಾಗಾಗಿ ಅವರು 'ಸಾಹಿತ್ಯದೊಡನೆ ಹೋರಾಡಿ,



ಅರ್ಥದೊಡನೆ ಗುದ್ದಾಡಿ, ತಪ್ಪೋನೆಪ್ಪೋ ಭಾವಗಳೊಡನೆ ಗಾರುಡಿಯಾಡಿ, ನನ್ನ ಬುದ್ಧಿಗೆ ವ್ಯಾಯಾಮ ಒದಗಿ ಬಲಿಷ್ಠವಾಯಿತು; ಉಜ್ಜಿ ಉಜ್ಜಿ ನನ್ನ ಭಾವಶಕ್ತಿ ಉಜ್ವಲವಾಯಿತು, ಪ್ರತಿಭೆಗೆ ಒಂದು ಕೆಚ್ಚು ಲಭಿಸಿ, ಆತ್ಮ ಪ್ರತ್ಯಯ ನಿಷ್ಠೆಗೆ ನಾಂದಿಯಾಯಿತು' ಎಂದು ಹೇಳಿಕೊಂಡಿದ್ದಾರೆ (ನೆ.ದೋ. ಪು. 160).

## 'Beginner's Muse'

ಕುವೆಂಪು ಅವರು ಓದುತ್ತಿದ್ದ ಮಿಶನ್ ಸ್ಕೂಲಿನಲ್ಲಿ ಕನ್ನಡ ಪಠ್ಯ ವಿಷಯ ಮಾತ್ರವಾಗಿತ್ತು. ಅವರು ಇಂಗ್ಲಿಷ್ ಕವಿಗಳನ್ನು ಅನುಸರಿಸಿ ಕವನ ರಚಿಸುತ್ತಿದ್ದರು. ವಾರ್ಷಿಕೋತ್ಸವ, ಪ್ರಿನ್ಸಿಪಾಲರ ವರ್ಗಾವಣೆ ಸಂದರ್ಭದಲ್ಲಿ ಕವನ ರಚಿಸಿ ಸ್ನೇಹಿತರು, ಉಪಾಧ್ಯಾಯರಿಂದ ಮೆಚ್ಚುಗೆ ಪಡೆಯುತ್ತಿದ್ದರು. ಅವರಲ್ಲಿ ನೈಸರ್ಗಿಕವಾಗಿದ್ದ ಭಾವಾಭಿವ್ಯಕ್ತಿಗಾಗಿ ಇಂಗ್ಲಿಷ್‌ನಲ್ಲಿಯ ಕವನ ರಚನೆ ಮುಂದುವರಿಸಿದ್ದರು.

ಅವರು ಎಸ್.ಎಸ್.ಎಲ್.ಸಿ ಓದುತ್ತಿದ್ದಾಗ 1922ರಲ್ಲಿ 'Beginner's Muse' ಎಂಬ ಹದಿನಾರು ಪುಟದ ಪುಸ್ತಕ ಪ್ರಕಟಿಸಿದ್ದರು. ಆಗ ಅದರ ಬೆಲೆ ಎರಡಾಣೆ. ಅದು ಅನುಕರಣ ಮಾತ್ರದ ಅಭ್ಯಾಸವಾಗಿತ್ತು. ಆದರೆ ಅದರಲ್ಲಿ ಅಯಾಂಬಿಕ್ ಪೆಂಟಾಮೀಟರ್, ಅಯಾಂಬಿಕ್ ಟೆಟ್ರಾಮೀಟರ್, ಬ್ಯಾಲಡ್, ಸಾನೆಟ್ಟುಗಳ ಸಮರ್ಥ ಅಭ್ಯಾಸ ಪೂರ್ಣ ಕವನಗಳಿವೆ. ಮಾದರಿಗಾಗಿ ಈ ಕೆಳಗಿನ ಕವನದ ಸಾಲುಗಳು:

### AWAKE MY SLUMBERING HEART!

Awake my slumbering heart! The breezy morn
Displays its glorious scenes: the rosy east,
Adorned by Aurora, who nobly drest,
With bright-some Lucifer, smiles on the lorn.

## ತಾಯಿಯಿಂದ ಬಂದ ಕಾವ್ಯ ಸಂಸ್ಕಾರ

ಕುವೆಂಪು ಅವರು 1921–22ರಲ್ಲಿ ವೆಂಕಟಯ್ಯ ಅವರಿಗೆ ಕಾವ್ಯ ಭಾಷೆಯಲ್ಲಿ ಭಾವಪೂರ್ಣ ಪತ್ರ ಬರೆಯುತ್ತಿದ್ದರು. ಅದನ್ನು ಹೊಸಮನೆ ಮಂಜಪ್ಪಗೌಡರು ಓದಿ, ಹೊಗಳಿ ಇತರರಿಗೆ ತಿಳಿಸುತ್ತಿದ್ದರು. ಅದು ಕುವೆಂಪು ಅವರ ತಾಯಿಯ ಕಿವಿಗೆ ಬಿದ್ದಿತು. 1921ರ ರಜೆಯಲ್ಲಿ ಊರಿಗೆ ಹೋಗಿದ್ದಾಗ ಅವರ ತಾಯಿ 'ಪುಟ್ಟೊ, ನೀನು ಇಂಗ್ಲಿಷಿನಲ್ಲಿ ಏನೇನೋ ಬರೆದೀಯಂತಲ್ಲಾ ದೇವಂಗಿ ಎಂಕ್ಟಯ್ಯಗೆ, ಅದೇನು ಬರೆದಿದ್ದೀಯಾ ಹೇಳೊ!' ಎಂದು ಕೇಳುವರು ಆಗ ಕವಿ 'ನನಗೇ ಬುದ್ಧಿ ಸ್ಪಷ್ಟವಾಗಿರದಿದ್ದ, ಅದನ್ನು ಅವ್ವಗೆ ತಿಳಿಸುವುದು ಹೇಗೆ?' ಎಂದು ತನ್ನನ್ನೆ ಪ್ರಶ್ನಿಸಿಕೊಳ್ಳುತ್ತಾರೆ. ಅದು ಅವರು ಆತ್ಮಶೋಧಕ್ಕೆ ಒಳಗಾಗಿ ಸ್ಪಷ್ಟತೆಗೆ ತೆರೆದುಕೊಂಡ ಗುಣವನ್ನು ಪರಿಚಯಿಸುತ್ತದೆ.

ಅವರ ತಾಯಿ ಸೀತಮ್ಮನವರ ತಂದೆ ತಿಮ್ಮಯ್ಯ ನಾಯಕರು ತುಂಬ ಶ್ರೀಮಂತಾಭಿರುಚಿಯವರೂ, ಲಲಿತಕಲಾ ರಸಿಕರೂ ಆಗಿದ್ದರು. ಅವರ ತಾಯಿ ತನ್ನ ಬಾಲ್ಯ ಕಾಲದಿಂದಲೂ ತಾಳ ಮದ್ದಲೆಯ ಯಕ್ಷಗಾನಾದಿಗಳನ್ನು ಆಲಿಸಿ, ನೋಡಿ ಸವಿದಿದ್ದರು. ಆದ ಕಾರಣ ಕುವೆಂಪು 'ನನ್ನ ರಾಮಾಯಣ ಭಾರತಾದಿ ಸಾಹಿತ್ಯಾಭಿರುಚಿಗೆ, ನನಗೆ ಒಮ್ಮೊಮ್ಮೆ ಊಹಿಸಿಕೊಳ್ಳಲು ಹೆಮ್ಮೆಯಾಗುತ್ತದೆ. ನನ್ನ ಅವ್ವ ತಾನು ಚಿಕ್ಕಂದಿನಿಂದಲೂ ಆಲಿಸಿ ಆಸ್ವಾದಿಸಿದುದರ ಸಂಸ್ಕಾರವೂ ಒಂದು ಪ್ರಧಾನ ಕಾರಣವಾಗಿರಬೇಕು' ಎಂದು ಹೇಳಿಕೊಂಡಿದ್ದಾರೆ (ನೆ. ದೋ. 186).

ಆ ತಾಯಿ 'ಓ ಲಕ್ಷ್ಮಣಾ!' ಎಂದು ಕಷ್ಟದಲ್ಲಿ ಉದ್ಗರಿಸುತ್ತಿದ್ದ ನುಡಿ ಶ್ರೀರಾಮಾಯಣ ದರ್ಶನಂ ಮಹಾಕಾವ್ಯದ ಒಂದು ಸಂಚಿಕೆಯ ಹೆಸರಾಗಿದೆ. ಅದನ್ನು ಅವರು 'ಓ ಲಕ್ಷ್ಮಣಾ! ಎಂಬುದು ಏನೋ ಒಂದು ಕಷ್ಟಕ್ಕೋ ಗೋಳಿಗೋ ದುರಂತಕ್ಕೊ ವಾಕ್ ಪ್ರತಿಮೆಯಾಗಿ ಬಿಟ್ಟಿತು. ನನ್ನ ಅಂತಃ ಪ್ರಜ್ಞೆಯಲ್ಲಿ' ಎಂದು ತಿಳಿಸಿದ್ದಾರೆ.



ಅವರು ಆ ರಜಾ ಅವಧಿಯಲ್ಲಿ ಕುಪ್ಪಳಿಯಲ್ಲಿ ತಿಲಕರ 'ಗೀತಾರಹಸ್ಯ' ಓದಿದರು. ಆ ಸಮಯದಲ್ಲಿ ಕೆಲವು ದಿನ ಇಂಗ್ಲಾದಿಗೆ ಹೋಗಿದ್ದರು. ಆಗ ದೇವಂಗಿ ರಾಮಣ್ಣಗೌಡರೊಡನೆ (ದೊಡ್ಡಮಾವ) ಅವರ ಎರಡನೇ ಹೆಂಡತಿ ನಂಬಳದ ಅಮ್ಮನ 'ಬಾಲೆ ತೊಟ್ಟಿಲಿಗೆ ಹಾಕುವ' ಶಾಸ್ತ್ರಕ್ಕೆ ಹೋಗಿದ್ದರು. ಮಾವನ ಸೂಚನೆಯಂತೆ ಆ ಹೆಣ್ಣು ಶಿಶುವಿಗೆ ಇವರು 'ಹೇಮಾವತಿ' ಎಂದು ಹೆಸರಿಟ್ಟರು! ಅದೇ ಹೆಣ್ಣನ್ನು 1937ರಲ್ಲಿ ಮದುವೆಯಾದರು!

* * *

# ಎಂಟ್ರೆನ್ಸ್ ಕ್ಲಾಸ್ ವಿದ್ಯಾರ್ಥಿ

ಕುವೆಂಪು ಅವರು ಎಸ್.ಎಸ್.ಎಲ್.ಸಿ ನಂತರ ಎಂಟ್ರೆನ್ಸ್ ಕ್ಲಾಸಿನಲ್ಲಿ ಓದುತ್ತಿದ್ದಾಗ ಆಯ್ದುಕೊಂಡ ಐಚ್ಛಿಕ ವಿಷಯಗಳು ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ. ಅವರು ಆ ಸಮಯದಲ್ಲಿ ಬರೆದ ಕವನ 'Random Lines' ನಲ್ಲಿ ತಮ್ಮ ಆಂತರ್ಯದ ಇಚ್ಛೆಯನ್ನು ಹೀಗೆ ಪ್ರಕಟಪಡಿಸಿದ್ದಾರೆ.

‘Philosophy is my delight,  
And poetry my heaven;  
I take with these my refuge bright,  
From the Vast World When driven.’

ಆ ಅವಧಿಯಲ್ಲಿ ಥಾಮಸ್‌ಗ್ರೇ ಕವಿಯ ‘ಎಲಿಜೆ’ಯ ನೆನಪಿನಲ್ಲಿ ಒಂದು ಕವನವನ್ನು ಚಾಮುಂಡಿ ಬೆಟ್ಟದ ಬುಡದ ಶ್ಮಶಾನ ಕ್ಷೇತ್ರದ ನಿರ್ಜನತಾ ಪ್ರದೇಶದಲ್ಲಿ ಕುಳಿತು ರಚಿಸಿದರು. ವಿವೇಕಾನಂದರ ಕೃತಿಗಳ ಅಧ್ಯಯನದಿಂದ ಪ್ರಭಾವಿತರಾಗಿ ಆ ಶ್ಮಶಾನದಲ್ಲಿ ಪದ್ಮಾಸನವಿಕ್ಕಿ ತಾತ್ತ್ವಿಕ ಧ್ಯಾನದಲ್ಲಿ ಮಗ್ನರಾಗುತ್ತಿದ್ದರು. ಅವರ ಚೇತನ ಅದ್ವೈತದ ‘ಅಭೀಃ’ ತತ್ತ್ವವನ್ನು ಅನುಸಂಧಾನ ಮಾಡಿ ಅಮೃತತ್ವವನ್ನು ಅನುಭವಿಸುತ್ತಿತ್ತು ಎಂದು ಆತ್ಮಕಥೆಯಲ್ಲಿ ತಿಳಿಸಿದ್ದಾರೆ.

ಅವರು ಇಂಗ್ಲಿಷ್ ಕವನಗಳನ್ನು ಪ್ರಯೋಗಶೀಲವಾಗಿ ವಿವಿಧ ಛಂದಸ್ಸುಗಳಲ್ಲಿ ರಚಿಸುತ್ತಿದ್ದರು. ಅದರ ನಾದ, ಲಯ, ಪ್ರಾಸಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ಮಿಲ್ಟನ್, ವರ್ಡ್ಸ್‌ವರ್ತ್‌ರ ಸಾನೆಟ್ ರೂಪ ಅವರ ಮೇಲೆ ತುಂಬಾ ಪರಿಣಾಮ ಬೀರಿತ್ತು. ‘ಕಿರಿದರಲ್ಲಿ ಹಿರಿದನ್ನು ಹೇಳುವ ಕಲೆಗೆ ‘ಸಾನೆಟ್’ ಮಾತೃಸ್ಥಾನವಾಗಿತ್ತು’ ಎಂದು ತಿಳಿದಿದ್ದ ಅವರು ಅಭ್ಯಾಸಕ್ಕಾಗಿ ನೂರಾರು ಸಾನೆಟ್ ರಚಿಸಿದ್ದರು. ಅವರ ಕಾವ್ಯ ರಚನಾ ಪರಿಣತಿಯನ್ನು 'Recollection',



'University of Mysore', 'India to England' ಮುಂತಾದವುಗಳಲ್ಲಿ ಕಾಣಬಹುದು.

ವರ್ಡ್ಸ್‌ವರ್ತ್ ಕವಿಯ ಅಧ್ಯಯನದಿಂದ ಪ್ರಕೃತಿ ಸೌಂದರ್ಯಾಸ್ವಾದನೆ, ಸ್ವಾಮಿ ವಿವೇಕಾನಂದರ ಉಪನಿಷತ್ತಿನ ಪ್ರಭಾವದಿಂದ ನಿಸರ್ಗ ವಿಭವವನ್ನು ದಾರ್ಶನಿಕವಾಗಿ ಅವಲೋಕಿಸುವ ಅಭಿರುಚಿ ಅವರಲ್ಲುಂಟಾಯಿತು. ಅವರು ಲಾಂಗ್ ಫೆಲೊ, ಷೇಕ್ಸ್‌ಪಿಯರ್, ಚಾರ್ಲ್ಸ್‌ಕಿಂಗ್‌ಸ್ಲೀ, ಕಾರಲೈಲ್, ಕಾಲರಿಜ್, ಷೆಲ್ಲಿ, ಶರ್ಲಿ, ಬೆನ್‌ಜಾನ್‌ಸನ್, ಸ್ಟೂಅರ್ಟ್‌ಮಿಲ್ ಮುಂತಾದವರ ಕಾವ್ಯ ಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ಅನುವಾದಗಳ ಜೊತೆಗೆ ಸ್ವಂತ ಕವನ ರಚನೆಯನ್ನು ಸದಾ ಮಾಡುತ್ತಿದ್ದರು. ಅವರು 'ನಾನು ಕವಿತೆ ಬರೆಯುವುದು ಮತ್ತೇತಕ್ಕೂ ಅಲ್ಲ, ನನ್ನ ಆತ್ಮಾನಂದಕ್ಕಾಗಿ ಮತ್ತು ಇತರರು ಸ್ವಾಗತಿಸಿದರೆ ಅವರಿಗೂ ಆ ಆನಂದ ನೀಡುವುದಕ್ಕಾಗಿ' ಎಂದು ಭಾವಿಸಿದ್ದರು.

ಅವರು ವಚನ-ಕವನ (prose-poem), Blank Verse (ಅಪ್ರಾಸ ಛಂದಸ್ಸು)ನಲ್ಲಿ ಕವನಗಳನ್ನು ಬರೆಯುತ್ತಿದ್ದರು. ಶ್ರೀಕೃಷ್ಣ ಚೈತನ್ಯ ದೇವನ ಜೀವನ ಚರಿತ್ರೆ ಮತ್ತು ರವೀಂದ್ರನಾಥ ಠಾಕೂರರ ಗೀತಾಂಜಲಿ, 'ಸಾಧನಾ' ಭಾಷಣಗಳು, ಇತರ ಕಾವ್ಯಗಳ ಪ್ರಭಾವದಿಂದ ಅವರು ಭಕ್ತಿ ಸಾಧಕರಾಗಿದ್ದರು. ಆ ಭಾವಲೋಕದ ಫಲ 'ನನ್ನ ಗೋಪಾಲ' ನಾಟಕ ಎಂದು ಹೇಳಬಹುದು.

### ದಿನಚರಿ ಬರವಣಿಗೆ ಮತ್ತು Lotus Leaf Union

ಕುವೆಂಪು ಅವರು 1-1-1924 ರಿಂದ ದಿನಚರಿ ಬರೆಯಲು ಪ್ರಾರಂಭಿಸಿದರು. ಅದು ಅವರಿಗೆ ಖಚಿತ ದಾಖಲೆಗಳೊಂದಿಗೆ ಆತ್ಮಕಥೆ 'ನೆನಪಿನ ದೋಣಿಯಲ್ಲಿ' ಬರೆಯಲು ಸಹಾಯವಾಯಿತು. ಅವರು ಕವನಗಳ ವಾಚನ, ತತ್ತ್ವ ಜಿಜ್ಞಾಸೆ, ಸಾಹಿತ್ಯ ರಚನೆಗಳಿಂದ ಸ್ನೇಹಿತರೊಡಗೂಡಿ 'Lotus Leaf Union' 'ಪದ್ಮಪತ್ರ ಸಂಘ' ಕಟ್ಟಿದರು. ಅದರಡಿ ವಾರಕ್ಕೊಮ್ಮೆ ಸಭೆ ನಡೆಯುತ್ತಿತ್ತು. ಅದರಲ್ಲಿದ್ದ

ಸ್ನೇಹಿತರು: ಅನಂತರಾಮಯ್ಯ ಗೋಪಾಲಕೃಷ್ಣ ಶೆಟ್ಟಿ, ಟಿ. ರಾಮಯ್ಯ, ಕೆ. ಮಲ್ಲಪ್ಪ, ಪಂಟ್ಲು ಮಾರಿಶೆಟ್ಟಿ (ಕೃಷ್ಣ ಶೆಟ್ಟಿ), ಪುಪ್ಪಣ್ಣ, ಪಿ. ಮಲ್ಲಯ್ಯ, ಎಂ. ಬಸವರಾಜು, ಶಿವರಾಂ ಮುಂತಾದವರು. ಅವರು ಆ ಸಂಘದಲ್ಲಿ ಭಗವದ್ಗೀತೆ, ಶಂಕರ, ರಾಮಾನುಜ, ಮಾಧ್ವರ ತತ್ತ್ವಗಳನ್ನು ಕುರಿತು ಚರ್ಚಿಸುತ್ತಿದ್ದರು. ಮಹಾ ಪುರುಷರನ್ನು, ಮಹದಾಲೋಚನೆಗಳನ್ನು, ಮಹಾದರ್ಶನಗಳನ್ನು ಕುರಿತು ಮಾತನಾಡುತ್ತಿದ್ದರು. ಆ ಸಂಘದ ಸದಸ್ಯರ ಗ್ರೂಪ್ ಫೋಟೋ ತೆಗೆಸಿಕೊಂಡಿದ್ದರು.

ಕರುಣಾಮಯಿಯಾದ ಕುವೆಂಪು ತನಗೆ ಊರಿನಿಂದ ಬರುತ್ತಿದ್ದ ಹಣದಲ್ಲಿ ಉಳಿಸಿ, ಭಿಕ್ಷುಕರಿಗೆ ಒಂದಾಣೆ, ಎರಡಾಣೆ ಕೊಡುತ್ತಿದ್ದರು. ದೇವರ ಪ್ರಸಾದದ ಪೊಟ್ಟಣವನ್ನು ಭಿಕ್ಷುಕರಿಗೆ ನೀಡಿ ಸಂತೋಷಪಡುತ್ತಿದ್ದರು.

ಅವರು ಸ್ವಾಮಿ ವಿವೇಕಾನಂದರ ಕೃತಿಗಳ ಜೊತೆಗೆ ಸ್ವಾಮಿ ಅಭೇದಾನಂದ, ದಯಾನಂದ ಸರಸ್ವತಿ, ಪ್ರೇಮಾನಂದ ಭಾರತಿ, ಸ್ವಾಮಿ ಯೋಗೇಶ್ವರಾನಂದರ ಕೃತಿಗಳನ್ನು ಓದುತ್ತಿದ್ದರು. ಅವರು ವಿದ್ಯಾರ್ಥಿವೇತನದಲ್ಲಿ ಬೃಹತ್ ಸ್ತೋತ್ರ ರತ್ನಾಕರ, ಪಾಲ್‌ಗ್ರೇವ್‌ನ ಗೋಲ್ಡನ್ ಟ್ರೆಸರಿ (ಇಂಗ್ಲಿಷ್ ಕವನಗಳ ಸಂಗ್ರಹ), ಸೋಮೇಶ್ವರ ಶತಕ, ಗಾಂಧಿ, ರಸ್ಕಿನ್, ಟಾಲ್‌ಸ್ಟಾಯ್, ಚಾರ್ಲ್ಸ್ ಲ್ಯಾಂಬ್, ಜಾರ್ಜ್ ಈಲಿಯಟ್, ಟೆನಿಸನ್, ಸುರೇಂದ್ರನಾಥ ಬ್ಯಾನರ್ಜಿ, ಸರೋಜಿನಿ ನಾಯಿಡು ಮುಂತಾದವರ ಕೃತಿಗಳನ್ನು ವಿ. ಪಿ. ಯಲ್ಲಿ ತರಿಸಿ ಓದುತ್ತಿದ್ದರು.

### ಶಿಸ್ತಿನ ವಿದ್ಯಾರ್ಥಿ

ಕುವೆಂಪು ಅವರು ಪ್ರತಿದಿನ ಕೊಠಡಿಯಲ್ಲಿ ವ್ಯಾಯಾಮ ಮಾಡುತ್ತಿದ್ದರು. ಪ್ರತಿ ಭಾನುವಾರದ ದಿನ ಎಣ್ಣೆ ಸ್ನಾನ ಮಾಡುತ್ತಿದ್ದರು. ಅವರಿದ್ದ 'ಆನಂದ ಭವನ' ಕೊಠಡಿಯ ಹೋಟೆಲಿನ ಒಳ ಅಂಗಳದ ನಡುವೆ ಒಂದು ದೊಡ್ಡ ಸಂಪಿಗೆ ಮರ ಇತ್ತು. ಅದರ ವಿಶಾಲ ಸೌಂದರ್ಯ, ಪಕ್ಷಿಗಳ ಕಲರವ ಅವರಿಗೆ ಮುದ ನೀಡುತ್ತಿತ್ತು.



ಅವರು ಸ್ನೇಹಿತರಿಗೆ ಪದ್ಯ ಕಾಗದ (Poem Letter) ಬರೆಯುತ್ತಿದ್ದರು. ಸ್ನೇಹಿತರೊಡನೆ ಸಂಜೆ ಕಾರಂಜಿ ಕೆರೆ, ಚಾಮುಂಡಿಬೆಟ್ಟಕ್ಕೆ ವಾಕಿಂಗ್ ಹೋಗುತ್ತಿದ್ದರು. ಸ್ನೇಹಿತರೊಡನೆ ಆಗಾಗ್ಗೆ ಸಿನಿಮಾಕ್ಕೆ ಹೋಗುತ್ತಿದ್ದರು. ಆಗ ಅವರು ನೋಡಿದ ಸಿನಿಮಾಗಳೆಂದರೆ. ರೋಮಿಯೊ ಜ್ಯೂಲಿಯೆಟ್, ದಿ ಲ್ಯಾಂಡ್ ಅಂಡ್ ದಿ ಲಯನ್, ದಿ ಲಾಸ್ಟ್ ಡೇಸ್ ಆಫ್ ಪಾಂಪಿ, ರಾಬಿನ್ ಸನ್ ಕ್ರೂಸೊ ಮುಂತಾದವುಗಳು. ಅವರು ಗೆಳೆಯರೊಡನೆ ಇಸ್ಪೀಟು ಆಡುತ್ತಿದ್ದರು. ಅದನ್ನು ಕುರಿತು 'most hideous and unworthy action!' ಎಂದು ಹೇಳಿದ್ದಾರೆ. ಅವರು 'ಹೇ ಜಗದೀಶ್ವರನೆ, ಕಾಲವನ್ನು ಸದ್ ವಿನಿಯೋಗಿಸಲು ನನಗೆ ಶಕ್ತಿ ಕೊಡು! ಜಯ್ ಕೃಷ್ಣ! ಜಯ್ ವಿವೇಕಾನಂದ!' ಎಂದು ವಿವೇಕಾನಂದರ ಪಟದ ಅಡಿ ಕುಳಿತು ಧ್ಯಾನಿಸುತ್ತ ಪ್ರಾರ್ಥಿಸುತ್ತಿದ್ದರು.

ಅವರು ಸಹಪಾಠಿಗಳೊಡನೆ ಹಾರ್ಡಿಂಜ್ ಸರ್ಕಲ್‌ನ ಉದ್ಯಾನಕ್ಕೆ ಹೋಗಿ ಪಠ್ಯಪುಸ್ತಕ ವಿಷಯಗಳನ್ನು ಅಧ್ಯಯನ ಮಾಡುತ್ತಿದ್ದರು. ಅವರು ಪರೀಕ್ಷೆ ಬರೆದು ಬರುವಾಗ–ಪಂದ್ಯಾಟದಿಂದ ಬರುವಂತೆ ಸಂತೋಷವಾಗಿ ಹೊರಬರುತ್ತ, ಅದು ಸೊಗಸಾಗಿತ್ತು ಎಂಬ ಭಾವದಲ್ಲಿರುತ್ತಿದ್ದರು.

ಕುವೆಂಪು ಅವರು ಎಂಟ್ರನ್ಸ್ ಕ್ಲಾಸ್ ವಿದ್ಯಾರ್ಥಿಯಾಗಿದ್ದಾಗ ಸಂಸ್ಕೃತ ಕಲಿಯಲು ಮನಸ್ಸು ಮಾಡಿ, ಚೆನ್ನಾಗಿ ಸಂಸ್ಕೃತ ಕಲಿತರು. ಅವರು ಲಕ್ಷ್ಮೀಶ ಕವಿಯನ್ನು ನಮ್ಮ ರಾಷ್ಟ್ರಕವಿ (poet laureate) ಎಂದು ಕರೆದು ಅವರು ರಚಿಸಿದ ಜೈಮಿನಿ ಭಾರತವನ್ನು ಪಠನ ಮಾಡುತ್ತಿದ್ದರು. ಕುವೆಂಪು ಅವರು ತಮ್ಮ ಭಾಷೆ ಮತ್ತು ಅಲಂಕಾರಗಳ ಮೇಲೆ ಪಂಪ, ರನ್ನ, ಕುಮಾರವ್ಯಾಸರಿಗೂ ಮೊದಲು ಪ್ರಭಾವ ಬೀರಿದ ಕವಿ ಲಕ್ಷ್ಮೀಶ ಎಂದು ತಿಳಿಸಿದ್ದಾರೆ.

ಅವರು ಪ್ರತಿಯೊಬ್ಬ ಮಹಾಪುರುಷನಿಗೂ ಒಬ್ಬೊಬ್ಬ ಗುರು ದೊರಕಿದ್ದಾನೆ. ತನಗೂ ದೊರಕಿದ್ದಾರೆ ಎಂಬ ಅರಿವಿನಲ್ಲಿ 'Vivekananda I posses, Ramakrishna I posses, Chaitanya I posses, Shankar I posses and many more. What more do I want?' ಎಂದು ಹೆಮ್ಮೆ ಪಟ್ಟುಕೊಂಡಿದ್ದರು.

**ಬೇಸಿಗೆ ರಜೆ**

ಕುವೆಂಪು ಅವರು 1924ರಲ್ಲಿ ಪರೀಕ್ಷೆ ಮುಗಿಸಿ ಕುಪ್ಪಳಿಗೆ ಹೋಗಿದ್ದರು. ಅದು ಅವರಿಗೆ ಬಾಲ್ಯದ ಬದುಕಿನ ಕೇಂದ್ರವಾಗಿ, ಮಲೆ ಕಾಡುಗಳಿಂದ ಸುತ್ತುವರಿಯಲ್ಪಟ್ಟು, ನಿಸರ್ಗ ಲಕ್ಷ್ಮಿಯ ಅತುಲ್ಯೈಶ್ವರ್ಯದ ಸೌಂದರ್ಯಾನುಭವ ಮತ್ತು ಭೂಮಾನುಭೂತಿಗಳನ್ನು ಅನುಗ್ರಹಿಸಿತ್ತು. ಒಮ್ಮೆ ಅವರು ಪುಟ್ಟಣ್ಣನೊಡನೆ ಕೋವಿ ಹಿಡಿದು ಸಾರಿಕೆ ಬೇಟೆಗೆ ಹೋದರು. ಇದ್ದಕ್ಕಿದ್ದಂತೆ ಹುಲಿಯ ಭಯಂಕರ ಆರ್ಭಟೆಯ ಘರ್ಜನೆ ಕೇಳಿಸಿತು. ಅವರು ಭಯದ ಲವಲೇಶವೂ ಇಲ್ಲದೆ ಪುಟ್ಟಣ್ಣನೊಡನೆ ಕೋವಿ ಹಿಡಿದು ನಿಂತರು. ಆಗ ಅವರಿಗೆ ಬ್ಲೇಕ್ ಕವಿಯ The forest shakes ಬರಿಯ ಅಲಂಕಾರದ ಉಕ್ತಿಯಲ್ಲ, ಲೋಕನಿಷ್ಠವಾದ ವೈಜ್ಞಾನಿಕ ಸತ್ಯ ಎಂಬ ಅನುಭವವಾಯಿತು!

ಅವರು ಶಿವಮೊಗ್ಗೆಗೆ ಹೋದಾಗ ಬೌದ್ಧಿಕ ಚರ್ಚೆಗೆ ಇಂಬಾಗುತ್ತಿದ್ದ ಸಾಹಿತ್ಯಾಸಕ್ತ ಗೆಳೆಯರು: ಡಿ. ಆರ್. ವೆಂಕಟಯ್ಯ, ಭೂಪಾಳಂ ಚಂದ್ರಶೇಖರಯ್ಯ ಎಸ್.ವಿ. ಕೃಷ್ಣಮೂರ್ತಿರಾವ್, ಕೂಡಲಿ ಚಿದಂಬರಂ, ಎ. ಸೀತಾರಾಂ, ಡಿ. ಆರ್. ಮಾನಪ್ಪ ಮೊದಲಾದವರು.

* * *



# ಮಹಾರಾಜ ಕಾಲೇಜ್ ವಿದ್ಯಾರ್ಥಿ

## ಐರಿಸ್ ಕವಿ ಜೇಮ್ಸ್ ಎಚ್. ಕಸಿನ್‌ರ ಭೇಟಿ

ಕುವೆಂಪು ಅವರು ಜೂನ್ 1924ರಲ್ಲಿ ಮಹಾರಾಜ ಕಾಲೇಜಿನಲ್ಲಿ ಬಿ. ಎ ಮೊದಲ ವರ್ಷದ ವಿದ್ಯಾರ್ಥಿಯಾಗಿ ಸೇರಿಕೊಂಡರು. ಮೇಷ್ಟ್ರು ಎಂ. ಎಚ್. ಕೃಷ್ಣಯ್ಯಂಗಾರ್ ಅವರ ಸಲಹೆಯಂತೆ ಕುವೆಂಪು ಅವರು 2–7–1924 ಬುಧವಾರ ಐರಿಸ್ ಕವಿ ಜೇಮ್ಸ್ ಎಚ್. ಕಸಿನ್ಸ್ ಅವರನ್ನು ಕಂಡರು. ತಮ್ಮ ಇಂಗ್ಲಿಷ್ ಕವನಗಳ ಹಸ್ತಪ್ರತಿಯನ್ನು ಕೊಟ್ಟರು. ಅದನ್ನು ಓದಿದ ನಂತರ ಕಸಿನ್ಸ್ ಅವರು 'ನೀವು ಇಂಗ್ಲಿಷಿನಲ್ಲಿ ಸೃಜನ ಸಾಹಿತ್ಯ ಸೃಷ್ಟಿ ಮಾಡಲಾರಿರಿ. ಅದು ನಿಮಗೆ ಪರಭಾಷೆ. ಹುಟ್ಟಿನೊಡನೆ ಬಂದ ಭಾಷೆಯಲ್ಲಿ ಮಾತ್ರ ಉತ್ತಮ ಸೃಜನ ಸಾಹಿತ್ಯ ಸೃಷ್ಟಿಯಾಗಬಲ್ಲದು. ಅದರಲ್ಲಿಯೂ ಕವಿತೆಯಲ್ಲಂತೂ ಉತ್ತಮ ಸೃಜನ ಸಾಹಿತ್ಯ ಯಾರಿಗೂ ಪರಭಾಷೆಯಲ್ಲಿ ಸಾಧ್ಯವಿಲ್ಲ' (ನೆ.ದೋ.366) ಎಂದು ವಿವೇಕದ ಮಾತುಗಳನ್ನಾಡಿ ಮಾರ್ಗದರ್ಶನ ಮಾಡಿದರು.

ಕುವೆಂಪು ಅವರ ಅಂತಃಪ್ರಜ್ಞೆ ಅದನ್ನು ಒಪ್ಪಿಕೊಂಡಿತು. ಅವರು ಅಂದಿನಿಂದ ಕನ್ನಡದಲ್ಲಿ ಕವನಗಳನ್ನು ರಚಿಸುವ ಮನಸ್ಸು ಮಾಡಿದರು. ಕನ್ನಡದ ರುಚಿ ಮತ್ತು ಅಭಿರುಚಿ ಹೆಚ್ಚಿದಂತೆಲ್ಲ ಇಂಗ್ಲಿಷ್ ತಿರೋಹಿತವಾಯಿತು. ಅವರು ಕನ್ನಡ ನಿಷ್ಠೆಯಿಂದ ರಚಿಸಿದ ಸುಂದರ ಕವನ 'ಪೂವು'. ಅವರ ಪ್ರಾರಂಭದ ಕವನಗಳನ್ನು ಅಸಿಸ್ಟೆಂಟ್ ಪ್ರೊಫೆಸರ್ ಬಿ. ಕೃಷ್ಣಪ್ಪ ತಿದ್ದಿ ಬೆನ್ನು ತಟ್ಟುತ್ತಿದ್ದರು.

ಅವರು ಇಂಗ್ಲಿಷಿನ ಟ್ರೈಮೀಟರ್, ಟೆಟ್ರಾಮೀಟರ್, ಪೆಂಟಾಮೀಟರ್, ಹೆಕ್ಸಾಮೀಟರ್ ಮೊದಲಾದವುಗಳಿಗೆ ಸಂವಾದಿಯಾಗಿ ಮೂರು ಮಾತ್ರೆಯ, ನಾಲ್ಕು ಮಾತ್ರೆಯ, ಮೂರು ನಾಲ್ಕು ಮಾತ್ರೆಯ, ಐದು ಮಾತ್ರೆಯ, ಆರು

ಮಾತ್ರೆಯ ಗಣಗಳನ್ನು ಉಪಯೋಗಿಸಬಹುದೆಂಬ ತತ್ತ್ವಕ್ಕೆ ಒಳಗಾದರು. ಅದಕ್ಕೆ ತಕ್ಕಂತೆ ಪ್ರಯೋಗಶೀಲವಾಗಿ ಕನ್ನಡ ಕವನಗಳನ್ನು ರಚಿಸುತ್ತಿದ್ದರು. ಅವರ ಕವನ 'ಜ್ಞಾನಗೀತೆ'ಯು ಮೈಸೂರಿನ The Wealth of Mysore-'ಸಂಪದಭ್ಯುದಯ' ಪತ್ರಿಕೆಯಲ್ಲಿ 24–7–1924ರಂದು ಪ್ರಕಟವಾಯಿತು. ಅವರು ಆಗಸ್ಟ್‌ನಲ್ಲಿ ರೂಮಿನಲ್ಲಿ 'ತಿಲಕರ ದಿನ' ಆಚರಿಸಿ, ಪಟವನ್ನು ಹೂ ಮಾಲೆಗಳಿಂದ ಅಲಂಕರಿಸಿದ್ದರು.

**'ಬ್ಲಾಂಕ್‌ವರ್ಸ್' 'ಸಾನೆಟ್' ರಚನಾ ತಂತ್ರ**

ಕುವೆಂಪು ಅವರು ಕಾವ್ಯ ರಚನಾ ಪ್ರಯೋಗಶೀಲರಾಗಿ ಬ್ಲಾಂಕ್‌ವರ್ಸ್–ಸರಳ ರಗಳೆ ಬರೆಯುವ ಗುಟ್ಟನ್ನು ಕಂಡುಹಿಡಿದರು. ಅದರಿಂದ ಕನ್ನಡದಲ್ಲಿ ಒಂದು ಶಕೆ ಪ್ರಾರಂಭವಾಗುತ್ತದೆ ಎಂದು ತಿಳಿದರು. ಬ್ಲಾಂಕ್ ವರ್ಸ್‌ನಲ್ಲಿ ರಚಿಸಿದ ಮೊದಲ ಕವನ: 'ಬೆಳದಿಂಗಳ ರಾತ್ರಿ'. ಅವರು ಮುಂದೆ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ತನ್ನ ಮಹೋನ್ನತ ಪರಿಪೂರ್ಣ ಭವ್ಯಾಕಾರದಲ್ಲಿ ವಿಜೃಂಭಿಸುತ್ತಿರುವ ಮಹಾಛಂದಸ್ ತ್ರಿವಿಕ್ರಮನಿಗೆ ಮೂಲ ಬೀಜಾಂಕುರಾರ್ಪಣೆ ಯಾದುದು ಈ ಅಣುವ ವಾಮನನಲ್ಲಿ' ಎಂದು ತಿಳಿಸಿದ್ದಾರೆ.

ಕವಿ ಕುವೆಂಪು ಅವರು ಕನ್ನಡದಲ್ಲಿ ಮೊತ್ತ ಮೊದಲು ಸ್ವತಂತ್ರವಾಗಿ ಸಾನೆಟ್ಟಿನ ರೂಪವನ್ನು ಕಂಡುಕೊಂಡಿದ್ದು 'ಸೊಬಗು' ಕವನ ರಚನೆಯ ಮೂಲಕ. ಅದರ ಚೌಕಟ್ಟು 5 ಮಾತ್ರೆಯ 4 ಗಣಗಳು. ಸಾಲು 14 ಪಂಕ್ತಿಗಳು. ಮೊದಲನೆಯ 8 ಮತ್ತು ಎರಡನೆಯ 3 + 3 = 6 ಪಂಕ್ತಿಗಳು.

'ಸಂಪದಭ್ಯುದಯ' ಅಥವಾ 'The Wealth of Mysore' ಪತ್ರಿಕೆಯಲ್ಲಿ 'ಚಂದ್ರನು,' 'ಚೈತ್ರ ವೈಶಾಖ' ಕವನಗಳು ಪ್ರಕಟವಾದವು. ಅದನ್ನು ಲಂಡನ್ನಿನಲ್ಲಿ ಮೈಸೂರಿನ ಪರವಾಗಿ ಟ್ರೇಡ್ ಕಮೀಷನರ್ ಆಗಿದ್ದ ಎಸ್. ಜಿ. ಶಾಸ್ತ್ರಿ ಮೆಚ್ಚಿದರು. ಅವರು ಕವಿಯ ಬಗ್ಗೆ ಪತ್ರಿಕಾ ಸಂಪಾದಕರಾದ ವೆಂಕಟಕೃಷ್ಣಯ್ಯನವರನ್ನು



ವಿಚಾರಿಸಿದರು. ಆಗ ಕುವೆಂಪು ಮೊದಲ ಬಾರಿಗೆ ಪತ್ರಿಕಾಲಯಕ್ಕೆ ಹೋಗಿ ಸಂಪಾದಕರನ್ನು ಕಂಡರು. ಇವರ ಕವನಗಳನ್ನು ದೇವಂಗಿ ಮಾನಪ್ಪ ಪ್ರತಿ ಮಾಡುತ್ತಿದ್ದರು.

**ಮನೆಯ ಹಿಸ್ಸೆ, ತಾಯಿಯ ಸಾವು**

ಕುವೆಂಪು ಅವರ ತಾಯಿ ಸೀತಮ್ಮ 1924ನೆ ಇಸವಿ ಶ್ರಾವಣ ಮಾಸದಲ್ಲಿ ತೀರಿಹೋದರು. ಅದಕ್ಕೆ 15ದಿನ ಮೊದಲು ಕುಪ್ಪಳಿ ಬಸಪ್ಪಗೌಡರು ತೀರಿಕೊಂಡಿದ್ದರು. ತಾಯಿ ತೀರುವ ಮೊದಲು ಮನೆ ಹಿಸ್ಸೆಯಾಗಿತ್ತು. ಹಿಸ್ಸೆ ಮೂರು ಪಾಲು: ಕುವೆಂಪು ಅವರ ತಂದೆಯದು, ದೊಡ್ಡ ಚಿಕ್ಕಪ್ಪ ರಾಮಣ್ಣಗೌಡರದು, ಮತ್ತು ಬಸಪ್ಪಗೌಡರದು. ಇವರ ಹಿಸ್ಸೆ ನೋಡಿಕೊಳ್ಳುತ್ತಿದ್ದವರು ರಾಮಣ್ಣಗೌಡರು.

ತಾಯಿ ತೀರಿಹೋದಾಗ ಸ್ನೇಹಿತರು ಊರಿಗೆ ಹೋಗಲು ಒತ್ತಾಯಿಸಿದರು. ಆಗಿನ ಅವರ ಮನಸ್ಥಿತಿಯನ್ನು ಅವರು ಆತ್ಮಕಥೆಯಲ್ಲಿ ಹೀಗೆ ತಿಳಿಸಿದ್ದಾರೆ: 'ನನಗೆ ತಿಥಿ-ಗಿತಿ ಮೊದಲಾದವುಗಳಲ್ಲಿ ನಂಬಿಕೆ ಇರಲಿಲ್ಲ. ಗತಿಸಿದ ಜೀವಾತ್ಮಕ್ಕೆ ನಾವು ಕೊಡುವ ತಿಲೋದಕ ತಲುಪುವುದೂ ಇಲ್ಲ. ಅದರಿಂದ ಆ ಜೀವಕ್ಕೆ ಪ್ರಯೋಜನವೂ ಇಲ್ಲ. ಅದರ ಬದಲು ಆ ಜೀವದ ಪ್ರಶಾಂತ ಪ್ರಯಾಣಕ್ಕೂ ಸದ್ಗತಿಗೂ ಭಗವಂತನನ್ನು ಭಕ್ತಿ ಶ್ರದ್ಧೆಗಳಿಂದ ಪ್ರಾರ್ಥಿಸುವುದೊಂದೇ ಬುದ್ಧಿ ಸಮ್ಮತವಾದ ಮಾರ್ಗವೆಂಬುದು ನನ್ನದಾಗಿತ್ತು.'

ತಾಯಿಯ ಹನ್ನೊಂದನೆಯ ದಿನದ ತಿಥಿಗೆ ಕುವೆಂಪು ಊರಿಗೆ ಹೋಗಿದ್ದರು. ಅವರು ತಾಯಿ ಪ್ರೇತವಾಗಿ ಇತರ ಪ್ರೇತಗಳೊಡನೆ ಬಂದು ಎಡೆ ಪಡೆಯುತ್ತಾರೆ ಎಂಬ 'ಕೊಲೆ ಕೊಡುವುದು' ಪದ್ಧತಿಯನ್ನು ಒಪ್ಪಲಿಲ್ಲ. ಧೂಪ ಹಾಕಲು ಒತ್ತಾಯಿಸಿದಾಗ ಹೆಂಡ ಮಾಂಸವನ್ನು ಎಡೆಯಿಂದ ತೆಗೆಸಿ, ಮಣೆಯ ಮೇಲೆ ಭಗವದ್ಗೀತೆ, ಶ್ರೀರಾಮಕೃಷ್ಣ ವಿವೇಕಾನಂದ ಪಟ ಸ್ಥಾಪಿಸಿದರು. ಹೂ ಮುಡಿಸಿ

ಮಂತ್ರಗಳನ್ನು ಶ್ಲೋಕಗಳನ್ನು ಮನದಲ್ಲಿ ಹೇಳಿಕೊಳ್ಳುತ್ತ ತಾಯಿಗೆ ಶಾಂತಿ ಕೋರಿ ಧೂಪ ಹಾಕಿದರು.

ತಾಯಿ ತೀರಿಹೋದ ನಂತರ, ಮದುವೆಯಾಗಿದ್ದ ದಾನಮ್ಮ ಮತ್ತು ಪುಟ್ಟಮ್ಮ ತಂಗಿಯರಿಬ್ಬರೂ ವಿಷಾದಕರ ಸನ್ನಿವೇಶಗಳಲ್ಲಿ ತೀರಿಹೋದರು. ತಾಯಿ ತೀರಿ ಹೋದ 7 ವರ್ಷದ ನಂತರ ಬರೆದ 'ಜನನಿಗೆ' ಕವನ (30-10-1931)ದಲ್ಲಿ ತಮ್ಮ ಭಾವವನ್ನು ಹೀಗೆ ವ್ಯಕ್ತಪಡಿಸಿದ್ದಾರೆ:

'ನಾಂ ಜಗದ ರಂಗದಲಿ ಏಕಾಂಗಿ;<br>
ತಂದೆ ತಾಯಿಗಳಿಲ್ಲ; ಅಣ್ಣನಿರಲೇ ಇಲ್ಲ;<br>
ಇದ್ದ ತಂಗಿಯರಿಲ್ಲ; ಸಾಧುಸಂಗದೊಳಿಂದು.'

**ಸಾಹಿತ್ಯ ಭೂಮಿಕೆಯ ಕ್ರಾಂತಿಕಾರಕ ಸಂಧಿಕಾಲ 1924**

ಕುವೆಂಪು ಅವರು ತಮ್ಮ ಸಾಹಿತ್ಯ ಭೂಮಿಕೆಯ ಸಂಧಿಕಾಲ ಕುರಿತು ಆತ್ಮಕಥೆಯಲ್ಲಿ ಹೀಗೆ ದಾಖಲಿಸಿದ್ದಾರೆ: 'ಸಾಹಿತ್ಯ ಭೂಮಿಕೆಯನ್ನು ಅನುಲಕ್ಷಿಸಿ ಹೇಳುವುದಾದರೆ 1924ನೆಯ ಸಂವತ್ಸರವು ನನ್ನ ಜೀವಮಾನದಲ್ಲಿ ಒಂದು ಕ್ರಾಂತಿಕಾರಕ ಸಂಧಿಕಾಲವಾಗುತ್ತದೆ.... ವಿಶೇಷವಾಗಿ ಇಂಗ್ಲಿಷ್ ಸಾಹಿತ್ಯ ಕ್ಷೇತ್ರದಲ್ಲಿ, ಮತ್ತು ಇಂಗ್ಲಿಷ್ ಭಾಷಾಂತರಗಳ ಮೂಲಕ ರಷ್ಯನ್, ಪ್ರೆಂಚ್, ಜರ್ಮನ್, ಇಟಾಲಿಯನ್ ಮತ್ತು ಸಂಸ್ಕೃತ ಸಾಹಿತ್ಯ ಕ್ಷೇತ್ರಗಳಲ್ಲಿ ನನ್ನ ಕವಿಪ್ರಜ್ಞೆ ಯಾತ್ರಿಯಾಗಿ ತನ್ನ ವಿಕಾಸದ ಸಿದ್ಧಿಗೆ ಅವಶ್ಯಕವಾದ ಚಿಂತನಾಂಶ, ಕಲ್ಪನಾಂಶ, ಭಾವಾಂಶ, ರೂಪಾಂಶಗಳನ್ನು ಸಂಪಾದಿಸಿತು...ನನ್ನ ಕವಿತಾಪ್ರತಿಭೆ ತನ್ನ ವಿದೇಶೀ ವಾಹನವನ್ನು ಮೆಲ್ಲ ಮೆಲ್ಲನೆ ತೊರೆದು ಮಾತೃಭಾಷೆಯ ಸ್ವದೇಶಿ ವಾಹನದ ಸವಾರಿಯಭ್ಯಾಸ ಮಾಡತೊಡಗಿತು.... ಸ್ವದೇಶಿ ವಾಹನ ಸುಪುಷ್ಟವಾಗಿ ಬಲಿಷ್ಠವಾದ ತರುವಾಯ ವಿದೇಶಿ ವಾಹನವನ್ನು ಸಂಪೂರ್ಣವಾಗಿ ತ್ಯಜಿಸಿ ಬಿಟ್ಟಿತು.... ಬ್ಲಾಂಕ್‌ವರ್ಸ್ ಅನುಕರಣೆಯಿಂದ, ಪ್ರಾಸ ವಿಮುಕ್ತವಾಗಲು ಹಾದಿ



ಕಂಡುಕೊಂಡ ಮೇಲೆ ನಾನು ಕ್ರಮೇಣ ದ್ವಿತೀಯಾಕ್ಷರ ಪ್ರಾಸದಿಂದ ಬಿಡುಗಡೆ ಪಡೆದೆನೆಂದು ತೋರುತ್ತದೆ (ನೆ.ದೋ. ಪು 420, 421)

ಅವರು 'ವಿಶ್ವವೆಲ್ಲವೂ ಆತ್ಮದಲ್ಲಿಯೇ ಐಕ್ಯವಾಗಿ ಇದೆ' ಎಂಬ ಅದ್ವೈತ ಭಾವದಲ್ಲಿ ಆ ಕಾಲದಲ್ಲಿ ಹಲವಾರು ಕವನಗಳನ್ನು ರಚಿಸಿದರು. ಅವರ ಪೂರ್ಣಾದ್ವೈತದ ಅರಿವು ಕಾವ್ಯವಾಗಿ ಹೀಗೆ ಹರಿದಿದೆ :

ಪರಮಾತ್ಮನಾಡುತಿಹನಲೆಯಾಗಿ ಲೀಲೆಯಿಂ;
ಮರಗಳಲಿ ಅಲರಾಗಿ ನಗುತಿಹನು; ನದಿಯಾಗಿ
ಹರಿಯುವನು; ಕವಿಯಾಗಿ ಸಂತೋಷ ಪಡುತಿಹನು !

(ನದೀ ತೀರ)

ಅದ್ವೈತ ಪರವಾದ ಮನೋಧರ್ಮದಲ್ಲಿದ್ದ ಕುವೆಂಪು ಅವರು ಅದನ್ನು ಕಾವ್ಯದಲ್ಲಿ ಹೀಗೆ ಅಭಿವ್ಯಕ್ತಿಸಿದ್ದಾರೆ:

'ನೀನೆ ನಾನಾಗಿ ಬಂದೊಡಾಂ ನೀನಲ್ಲವೇ?
ಜಲ ಮೋಡವಾಗಿ ಬಂದೊಡದು ವಾರಿತ್ವಮಂ
ಕಳೆಯುವುದೇ?'

* * *

'ನಾನಿಹೆನು ನಿನ್ನಲ್ಲಿ; ನೀನಿರುವೆ ನನ್ನಲ್ಲಿ!
ನಾನು ನೀನೆಂಬುದದು ಮಾಯೆ ತಾನಲ್ಲವೇ?'

(ನೀನಾರು)

2

ಅವರ ಆತ್ಮ ಶೋಧದ ಧ್ಯಾನಶೀಲ ಕವನಗಳು:

ಅಂತರತಮ ನೀ ಗುರು

ಹೇ ಆತ್ಮ ತಮೋಹಾರಿ!

ಜಟಿಲ ಕುಟಿಲತಮ ಅಂತರಂಗ ಬಹು

ಭಾವವಿಪಿನ ಸಂಚಾರಿ.

(ಅಂತರತಮ ನೀಗುರು: ಅಗ್ನಿಹಂಸ)

* * *

ತೇನ ವಿನಾ ತೇನ ವಿನಾ

ತೃಣಮಪಿ ನ ಚಲತಿ ತೇನ ವಿನಾ.

ಮಮತೆಯ ಬಿಡು, ಹೇ ಮೂಢಮನಾ

ಮೂಢಮನಾ, ಹೇಮೂಢಮನಾ

(ತೇನವಿನ : ಅಗ್ನಿಹಂಸ)

**'cipher!'**

ಕುವೆಂಪು ಅವರು ತಮ್ಮ 20ನೇ ವಯಸ್ಸಿನಲ್ಲಿ ಕಾಲೇಜಿಗೆ ಸೇರಿದ ಪ್ರಾರಂಭ (1924) ದಲ್ಲಿ ಕಾಲೇಜಿನ ಯೂನಿಯನ್‌ನಲ್ಲಿ ಪ್ರೊ॥ ವಿ. ಎಲ್. ಡಿಸೋಜ ಅವರ ಭಾಷಣ ಏರ್ಪಾಡಾಗಿತ್ತು. ಅವರು ಆಗತಾನೆ ಇಂಗ್ಲೆಂಡಿನಲ್ಲಿ ಅಧ್ಯಯನ ಪೂರೈಸಿ ಮಹಾರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಉತ್ತಮ ವಾಗ್ಮಿಗಳಾದ ಅವರು ಇಂಗ್ಲೆಂಡಿನಲ್ಲಿ ತಮಗಾದ ಅನುಭವವನ್ನು ವಿದ್ಯಾರ್ಥಿಗಳಿಗೆ ಉತ್ಸಾಹದಿಂದ ಹಾಸ್ಯ ಭರಿತವಾಗಿ ತಿಳಿಸಿದರು. ಕಾರ್ಯದರ್ಶಿಯು ವಿದ್ಯಾರ್ಥಿಗಳನ್ನು ಪ್ರಶ್ನೆ ಕೇಳಿ ಎಂದರು. ಯಾರೂ ಏನೂ ಕೇಳದಿರುವಾಗ ಕುವೆಂಪು ಎದ್ದು ನಿಂತು ಹೀಗೆ ಪ್ರಶ್ನಿಸಿದರು: 'What position does Mysore hold in the mind of the British public?'



ಅದಕ್ಕೆ 'cipher!' ಎಂಬ ಉತ್ತರ ಬಾಣದಂತೆರಗಿತು!

ಸಭೆ ಕೈ ಚಪ್ಪಾಳೆ ತಟ್ಟಿ 'ಘೇ, ಉಘೇ ಉಘೇ' ಎಂದಿತು. ಕುವೆಂಪುಗೆ ತೇಜೋಭಂಗವಾಯಿತು.

ಪ್ರೊ॥ ಡಿಸೋಜ ನೀಡಿದ 'ಸೊನ್ನೆ' ಎಂಬ ಉತ್ತರ ಸತ್ಯವಾಗಿತ್ತು. ಆದರೆ ಸ್ವದೇಶ ಭಕ್ತಿಯ ತರುಣ ಕುವೆಂಪುಗೆ ನಮ್ಮ ಮೈಸೂರು ಅಷ್ಟೊಂದು ಯಃಕಶ್ಚಿತವಾಯಿತಲ್ಲ ಎಂದು ಖೇದವಾಯಿತು. ಪ್ರೊ॥ ಡಿಸೋಜರ 'cipher' ಅನ್ನು ಸಹಿಸಲಾಗದೆ ಇಂಗ್ಲಿಷಿನಲ್ಲಿ ಭಾವಾತಿರೇಕವಾಗಿ ಕಾವ್ಯ ಭಾಷೆಯಲ್ಲಿ ಸಾಕಷ್ಟು ದೀರ್ಘ ಲೇಖನ ಬರೆದರು. ಅದರಲ್ಲಿ ತಾವೇ 'Maharaja College' ಶೀರ್ಷಿಕೆಯಲ್ಲಿ ಬರೆದಿದ್ದ ಸುದೀರ್ಘ ಕವನದ ಕೆಲವು ಪಂಕ್ತಿಗಳನ್ನು ಉದ್ಧರಿಸಿದರು. ಅದರಲ್ಲಿ 'ನಾವು ಅನಾಮಧೇಯರಾಗಿರಬಾರದು. ಲೋಕದಲ್ಲಿ ನಾವೂ ಪ್ರತಿಷ್ಠಿತ ಜನಾಂಗವಾಗಬೇಕು. ಸೊನ್ನೆ (cipher) ಗಳಾಗಿರಬಾರದು. ಅದಕ್ಕಾಗಿ ಸಾಹಸಿಗಳಾಗಬೇಕು, ದುಡಿಯಬೇಕು, ಎದ್ದು ನಿಂತು ಜಗನ್ನಯನ ಕೇಂದ್ರವಾಗಬೇಕು' ಎಂಬ ಭಾವವಿತ್ತು.

ಆ ಲೇಖನವನ್ನು 'ಕಿಶೋರ ಚಂದ್ರವಾಣಿ' ಎಂಬ ಗುಪ್ತನಾಮದ ಮರೆಯಲ್ಲಿ ಬೆಂಗಳೂರಿನಿಂದ ಹೊರಡುತ್ತಿದ್ದ ಇಂಗ್ಲಿಷ್ ದಿನ ಪತ್ರಿಕೆ 'Daily Mail' ಗೆ ಕಳುಹಿಸಿದರು. ಅದು ಎರಡು ಮೂರು ದಿನಗಳ ನಂತರ ಆ ಪತ್ರಿಕೆಯಲ್ಲಿ ಪ್ರಕಟವಾಯಿತು.

ಜೊತೆಗೆ ಹಾಗೆ 'cipher' ಎಂದು ಪ್ರೊಫೆಸರ್ ಹೇಳಿದ್ದು ರಾಜದ್ರೋಹ. ಈ ವಿಷಯವಾಗಿ ಅರಮನೆಯಲ್ಲಿ ಅಲ್ಲೋಲ ಕಲ್ಲೋಲವಾಗಿ ವಿಶ್ವವಿದ್ಯಾಲಯಕ್ಕೆ ವಿವರಣೆ (Explanation) ಕೇಳಿದ್ದಾರೆ ಎಂದು ಹೇಳಿ, ಅಗ್ರಲೇಖನ ಬರೆದವನನ್ನು ವಿದ್ಯಾರ್ಥಿಗಳು ಮತ್ತು ಇತರರು ಖಂಡಿಸಿದರು.

ಕೆಲವು ಆಪ್ತ ಸ್ನೇಹಿತರಿಗೆ ಆ ಲೇಖನ ಬರೆದವರು ಕುವೆಂಪು ಎಂದು ಗೊತ್ತಾಗಿ ಪ್ರಶ್ನಿಸಿದಾಗ ಇವರು 'ಹೌದು' ಎಂದರು. ಹೀಗೆ ಮೂರು ನಾಲ್ಕು ದಿನಗಳು ಕಳೆದ ನಂತರ ಇಬ್ಬರು ಮೂವರು ಗೆಳೆಯರು 'ಡಿಸೋಜ ಅವರಿಗೆ ತುಂಬ ಮನಸ್ಸು ನೊಂದು ಕಾತರರಾಗಿದ್ದಾರೆ. ಲೇಖನ ಬರೆದವನು ನಾನೇ ಎಂದು ನೀವೇ ಹೋಗಿ ಹೇಳಿಬಿಡಿ' ಎಂದರು. ಕುವೆಂಪು ಅವರೊಡನೆ ಹಾಗೂ ಡಿಸೋಜರ ಮೆಚ್ಚಿನ ವಿದ್ಯಾರ್ಥಿಗಳೊಡನೆ ಅವರ ಕೊಠಡಿಗೆ ಹೋಗಿ ಕಂಡರು. 'ಕಿಶೋರ ಚಂದ್ರವಾಣಿ ಹೆಸರಿನಲ್ಲಿ ಲೇಖನ ಬರೆದವನು ನಾನೆ' ಎಂದು ಹೇಳಿದರು. ಆ ಪ್ರೊಫೆಸರ್ ಲೇಖನದ ಭಾಷೆ, ಉದ್ಧರಿಸಿದ ಕವನ ಪಂಕ್ತಿಗಳ ರಚನೆ ಮೆಚ್ಚಿ ಹೊಗಳಿದರು. ಆ ಲೇಖನದಲ್ಲಿ ನಿಂದಾತ್ಮಕವಾದುದು ಏನು ಇಲ್ಲ ಎಂದು ಒಪ್ಪಿದರು!

ಆ ಪ್ರೊಫೆಸರ್ 'ಬಿ.ಎಂ.ಶ್ರೀ ಅವರಲ್ಲಿಗೆ ಕರೆದೊಯ್ದು ಪರಿಚಯಿಸುತ್ತೇನೆ. ಸಂಘದ ಅಧ್ಯಕ್ಷರಾದ ಅವರು ನೊಂದುಕೊಂಡಿದ್ದಾರೆ. ಅವರು ಹೇಳುವಂತೆ ದಯವಿಟ್ಟು ಮಾಡಿ' ಎಂದು ಹೇಳಿದರು. ಪಕ್ಕದ ಬಿ.ಎಂ.ಶ್ರೀ ಕೊಠಡಿಗೆ ಕರೆದುಕೊಂಡು ಹೋಗಿ ಕುವೆಂಪು ಅವರನ್ನು ಪರಿಚಯಿಸಿ ವಿಷಯವನ್ನೆಲ್ಲ ವಿವರವಾಗಿ ತಿಳಿಸಿದರು.

ಇಂಗ್ಲಿಷ್ ಪ್ರೊಫೆಸರ್ ಬಿ.ಎಂ.ಶ್ರೀ ಅವರು ಲೇಖನದ ಭಾಷೆ, ಭಾವ, ಅಲ್ಲಿ ಉದ್‌ಧೃತವಾಗಿದ್ದ ಭಾಗಗಳನ್ನು ಮೆಚ್ಚಿದರು. 'ಸರಕಾರದ ಅಧಿಕಾರಿಗಳಾಗಿರುವ ಪ್ರಾಧ್ಯಾಪಕರು ಸಂಸ್ಥಾನದ ಹೆಸರಿಗೆ ಅವಹೇಳನವಾಗುವಂತೆ ಮಾತನಾಡಿದ್ದಾರೆ ಎಂಬ ಭಾವ ಬರುವಂತೆ ಆ ಸಂಪಾದಕ ಪ್ರೊ॥ ಡಿಸೋಜರನ್ನು ಖಂಡ ತುಂಡವಾಗಿ ಖಂಡಿಸಿ ಒಂದು ಸಣ್ಣ ಉಪ-ಅಗ್ರಲೇಖನ ಸೇರಿಸಿ ಬಿಟ್ಟಿದ್ದಾನೆ. ಅವನಿಗೊಂದು ಪತ್ರ ಬರೆಯಿರಿ' ಎಂದು ಹೇಳಿದರು.

ಕುವೆಂಪು ಬರೆಯತೊಡಗಿದಾಗ ನಿಲ್ಲಿಸಿ ಅವರೇ ಕಾಗದ ಲೇಖನಿ ವಾಪಸು ತೆಗೆದುಕೊಂಡು ತಾವೇ ಪತ್ರ ಬರೆದರು. ಬಿ.ಎಂ.ಶ್ರೀ ಅವರು ಬರೆದು ಕೊಟ್ಟಿದ್ದನ್ನು ವಿದ್ಯಾರ್ಥಿ ಕುವೆಂಪು ಓದಿದರು. ಆ ಪತ್ರದಲ್ಲಿ ಅವರ ಲೇಖನವನ್ನು ಸಂಪಾದಕನು



ಅಗ್ರಲೇಖನವನ್ನಾಗಿ ಮಾಡಿಕೊಂಡದ್ದು ತಪ್ಪು ಎಂಬ ಅಭಿಪ್ರಾಯವೂ, ಅದಕ್ಕಾಗಿ ಅವನ ವರ್ತನೆ ಖಂಡನೀಯ ಎಂಬ ಭಾವನೆ ಧ್ವನಿಸುತ್ತಿತ್ತು. ಆ ಪತ್ರಕ್ಕೆ ರುಜು ಹಾಕಲು ಕುವೆಂಪು ಒಪ್ಪಲಿಲ್ಲ. ಬಿ.ಎಂ.ಶ್ರೀ ತಾವೇ ಪತ್ರ ಬರೆಯುವುದಾಗಿ ಹೇಳಿದರು.

ಈ ಘಟನೆ ಕುವೆಂಪು ಅವರ ತೂಕದ ಬರಹ, ಸತ್ಯನಿಷ್ಠೆ, ಯಾರಿಗೂ ಜಗ್ಗದೆ ತನ್ನ ನಿಲುವನ್ನು ಸಮರ್ಥಿಸಿಕೊಳ್ಳುವ ಧೈರ್ಯದ ನಡೆಗೆ ಸಾಕ್ಷಿಯಾಗಿದೆ.

### ಮಹಾತ್ಮ ಗಾಂಧೀಜಿ ದರ್ಶನ

ಕುವೆಂಪು ಅವರು ಡಿಸೆಂಬರ್ 1924ರಲ್ಲಿ ಭೂಪಾಳಂ ಚಂದ್ರಶೇಖರಯ್ಯ ಮತ್ತು ಇನ್ನಿತರ ಇಬ್ಬರು ಸ್ನೇಹಿತರೊಡಗೂಡಿ ರೈಲಿನಲ್ಲಿ ಬೆಳಗಾವಿ ರಾಷ್ಟ್ರೀಯ ಅಧಿವೇಶನಕ್ಕೆ ಹೋಗಿದ್ದರು. ಗಾಂಧೀಜಿಯನ್ನು ಹತ್ತಿರದಿಂದ ನೋಡಲು ಮಹಾದ್ವಾರದ ಬಳಿ ಹೋಗಿ ಕಾದರು. ಗಾಂಧೀಜಿಯನ್ನು ಕಂಡಾಗ ಅವರ ಮನದಲ್ಲಿ ಉಂಟಾದ ಆನಂದವನ್ನು ಹೀಗೆ ವ್ಯಕ್ತ ಪಡಿಸಿದ್ದಾರೆ:

'ನಮ್ಮ ಗೌರವ ಸಮಸ್ತವೂ ಸಾಷ್ಟಾಂಗವೆರಗಿತ್ತು ಅವರ ಪದತಲದಲ್ಲಿ! 'ವಂದೇ ಮಾತರಂ! ಭಾರತ ಮಾತಾಕೀ ಜೈ! ಮಹಾತ್ಮಾ ಗಾಂಧೀ ಕೀ ಜೈ!' ಮೊದಲಾದ ಘೋಷಗಳು ಕಿವಿ ಬಿರಿಯುವಂತೆ ಗಗನ ದೇಶವನ್ನೆಲ್ಲ ತುಂಬಿದುವು. ಆ ಉತ್ಸಾಹ ಸಾಗರಕ್ಕೆ ನನ್ನ ಕೀಚು ಕೊರಳೂ ತನ್ನ ದನಿ ಹನಿಯ ನೈವೇದ್ಯವನ್ನು ನೀಡಿ ಧನ್ಯವಾಗಿತ್ತು!... ಸ್ವಾತಂತ್ರ್ಯ ದೀಕ್ಷೆಯನ್ನು ತೊಟ್ಟು ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮ್ಮಿಕ್ಕುವ ಭಾರತೀಯ ಸಮಷ್ಟಿ ಚೈತನ್ಯದ ಅಗ್ನಿ ಸ್ಪರ್ಶ ನನ್ನ ಕವಿ ಚೇತನಕ್ಕೂ ತಗುಲಿತ್ತು.' (ನೆ.ದೋ.ಪು 455).

ಆಗ ಅವರು ಇಂಗ್ಲಿಷಿನಲ್ಲಿ ರಚಿಸಿದ ಕವನಗಳು 'Jallianwala-Bagh!' ಮತ್ತು 'To Deshabandhu Das'. 'ಜಲಿಯನ್ ವಾಲಾ ಬಾಗ್' ಕವನದಲ್ಲಿ ಡಯರ್ ಎಂಬ ಬ್ರಿಟಿಷ್ ಅಧಿಕಾರಿ ನಡೆಸಿದ ಅಮಾನವೀಯ ಅತ್ಯಂತ ಕ್ರೂರ, ಭೀಕರ ನರಹತ್ಯೆಗೆ ಕವಿಯ ನೋವು ಆಕ್ರೋಶ ನುಡಿರೂಪ ಪಡೆದಿದೆ.





**JALLIANWALA-BAGH!**

Hell, open wide thy lakes of fire!
Blaze forth thy eternal ire!
Belch hideous torches from the caves
Dismal and dark over the graves
Of heart-less tyrants, hellish Knaves
Who lick the blood of human wounds
Like cruel, horried, hellish hounds,
And open fire on guiltless souls,
And lynch the noblest men in gaols!
Tear them to pieces, O Ye Fates,
And scatter them beside the gates
Of Sin and Death! Let hell consume
Them all, in one embrace of gloom:
Let that be their eternal doom.

***

The foe of virtue, friend of Vice
Who plucked the children off their eyes;
The source of all un-thought-of crimes,
The demon of all times and climes!
What darker hell and Stygian tire
Reside in thee, O Hell-doomed Dyer?

ಮಹಾತ್ಮ ಗಾಂಧಿಯವರು 20–9–1932 ರಂದು ಆಮರಣಾಂತ ಉಪವಾಸ ಪ್ರಾರಂಭಿಸಿದರು. ಕುವೆಂಪು ಅವರು ಆ ದಿನ ತಾವೂ ಉಪವಾಸ ಮಾಡಿದರು. ಆ ದಿನವನ್ನು ಅವರು ದಿನಚರಿಯಲ್ಲಿ ಹೀಗೆ ದಾಖಲಿಸಿದ್ದಾರೆ: 'ನನ್ನ ಹೃದಯವು ಯಾವುದೋ ಒಂದು ಅನಿರ್ದಿಷ್ಟ ಶೋಕ ಸಂಮಿಶ್ರ ಆನಂದದಿಂದ ಸ್ಪಂದಿಸುತ್ತಿದೆ.



ಮಹಾತ್ಮನಿಗಾಗುವ ನೋವಿನಲ್ಲಿ ನೋಯುತ್ತಿದೆ. ಆದರೆ ಆತನ ಯಾತನೆಯಿಂದಲೆ ಮನುಜ ವರ್ಗದ ಗೌರವವು ನೂರ್ಮಡಿಯಾಗಿದೆ ಎಂದು ಹಿಗ್ಗುತ್ತಿದೆ. ಆತನೊಡನೆ ಮನುಷ್ಯನಾಗಿರುವ ನಾನು ಆತನ ನೋವಿನ ತಪಸ್ಸಿನಿಂದ ಪುನೀತನಾದೆ. ಗೀತೆಯ ಹದಿನೆಂಟು ಅಧ್ಯಾಯಗಳನ್ನೂ ಓದಿ ಪೂರೈಸಿದೆ.'

* * *

ಜನವರಿ 1934ರಲ್ಲಿ ಮಹಾತ್ಮ ಗಾಂಧಿಯವರು ಹರಿಜನ ಕಾರ್ಯಕ್ಕಾಗಿ ಮೈಸೂರಿಗೆ ಬಂದಿದ್ದರು. ಟೌನ್‌ಹಾಲ್ ನಲ್ಲಿ ಅವರನ್ನು ಕಾಣಲು 12 ಸಾವಿರಕ್ಕೂ ಹೆಚ್ಚು ಮಂದಿ ಕಿಕ್ಕಿರಿದಿದ್ದರು. ಕುವೆಂಪು ಅವರು ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳೊಡನೆ ಹೋಗಿ ಆ ನೂಕುತಾಕಿನ ನಡುವೆ ಗಾಂಧಿಯನ್ನು ನೋಡಿದರು. 'ಮಹಾತ್ಮರು ಭರತ ಖಂಡದ ಅನಭಿಷಿಕ್ತ ಚಕ್ರವರ್ತಿ! ಸಮಸ್ತ ಜಗತ್ತಿನ ಆಚಾರ್ಯ ದೇವ!' ಎಂದು ಹರ್ಷೋನ್ಮಾದಗೊಂಡರು.

## ಶ್ರೀ ರಾಮಕೃಷ್ಣರ ಜೀವನ ಚರಿತ್ರೆಯ ಕೃತಿ

'ಲೋಟಸ್ ಲೀಫ್ ಯೂನಿಯನ್' ಅರ್ಥಾತ್ 'ಪದ್ಮಪತ್ರ ಸಂಘ'ದ ಹೆಚ್ಚಿನ ಸದಸ್ಯರಲ್ಲಿ ಆರ್ಯ ವೈಶ್ಯ ಹಾಸ್ಟೆಲಿನ ವಿದ್ಯಾರ್ಥಿಗಳಿದ್ದರು. ಅಲ್ಲಿ ಅದರ ಸಭೆ ನಡೆಯುತ್ತಿತ್ತು. 1925 ಜನವರಿಯಲ್ಲಿ ಬೆಂಗಳೂರಿನ ಆರ್ಯವೈಶ್ಯ ವಿದ್ಯಾರ್ಥಿ ನಿಲಯದಲ್ಲಿ ಕುವೆಂಪು ಅವರು ವಿವೇಕಾನಂದರ ಬಗ್ಗೆ ಇಂಗ್ಲಿಷಿನಲ್ಲಿ ಮಾತನಾಡಿದರು. ಅವರು ಭೂಪಾಳಂ ಚಂದ್ರಶೇಖರಯ್ಯ ಅವರ ಕೊಠಡಿಯಲ್ಲಿ ಇಳಿದುಕೊಂಡಿದ್ದರು. ಅಲ್ಲಿ ಅವರಿಗೆ, ಅವರ ಜೀವನ ನೌಕೆಯ ಕರ್ಣಧಾರ ಸ್ವರೂಪವಾಗಲಿದ್ದ 'Life of Sri Ramakrishna Compiled from various Authentic sources' ಎಂಬ ಸ್ವಾಮಿ ಮಾಧವಾನಂದರ ಬೃಹತ್ ಕೃತಿ ಕಂಡಿತು. ಅದನ್ನು ಅವರು ಕೈಗೆ ತೆಗೆದುಕೊಂಡು ರಾತ್ರಿ 3 ಗಂಟೆಯವರೆಗೆ ತದೇಕಚಿತ್ತದಿಂದ ಓದಿದರು. ಅದನ್ನು ಭೂಪಾಳಂ ಹಾಗೂ ಗೋಪಾಲಕೃಷ್ಣ ಶೆಟ್ಟರು ಆರ್ಯವೈಶ್ಯ ಹಾಸ್ಟೆಲ್ ಪರವಾಗಿ ಕುವೆಂಪುಗೆ ಕಾಣಿಕೆಯಾಗಿ ನೀಡಿದರು.




**ಸ್ವಭಾಷಾ ಪ್ರೇಮ, ಮತಾಚಾರ ಸುಧಾರಣಾ ಜಾಗೃತಿ**

ಕುವೆಂಪು ಅವರಿಗೆ ಸ್ವದೇಶಿ ಚಳುವಳಿಯ ಪ್ರಭಾವದಿಂದ ಸ್ವಭಾಷಾ ಪ್ರೇಮ ಉಂಟಾಯಿತು. ಅವರೇ ಹೇಳಿರುವಂತೆ 'ಇಂಗ್ಲಿಷ್ ಕವನಗಳಲ್ಲಿ ಲೋಕವಸ್ತು ಪ್ರಾಧಾನ್ಯ ಕಾಣುತ್ತದೆ; ಕನ್ನಡ ಕವನಗಳಲ್ಲಿ ವಿಶೇಷವಾಗಿ ಭಕ್ತಿಯ, ಅಧ್ಯಾತ್ಮಿಕದ ಮತ್ತು ಭಗವತ್ ಪರವಾದ ಭಾವಗಳೆ ತೋರುತ್ತಿವೆ.'

ಕುವೆಂಪು ಅವರ ಮನಸ್ಸಿನಲ್ಲಿ ಮತಾಚಾರ ಸುಧಾರಣೆ ಜಾಗೃತವಾಗುತ್ತಿದ್ದ ಕಾಲದಲ್ಲಿ ರಚಿತವಾದ ಕವನ 'ಪೈಶಾಚ ಪೂಜೆ' (25–10–1924) ಅದರಲ್ಲಿ ನಿರ್ಮಲ ಆತ್ಮ ಕುರಿತು ಧ್ಯಾನಿಸುತ್ತ ಅದರ ಸಿದ್ಧಿಗಾಗಿ ಹರಿಯನ್ನು ಭಜಿಸು, ಹರಿಗೆ ಹರಕೆ ಬೇಕಾಗಿಲ್ಲ ಎಂದು ತಿಳಿ ಹೇಳಿದ್ದಾರೆ. ಪ್ರಾಣಿ ಬಲಿಯ ಅರ್ಥ ರಹಿತ ನಡೆ ಖಂಡಿಸಿ ಜನರಲ್ಲಿ ಜಾಗೃತಿ ಮೂಡಿಸಿದ್ದಾರೆ.

ಭಕ್ತಿಯಲ್ಲಿ ಮುಕ್ತಿಯಿರದೆ
ರಕ್ತದಲ್ಲಿ ಮುಕ್ತಿಯಿಹುದೆ?
ಯುಕ್ತಿಯಿಂದಲಿದನು ತಿಳಿದು
ಮುಕ್ತಿಯನ್ನು ಪಡೆಯೋ, ಜೀವ!

(ಪೈಶಾಚ ಪೂಜೆ)

ಅವರು ನೀಚ ಭೂತ, ದೆವ್ವ, ರಣ ಪಿಶಾಚಿಗಳನ್ನು ದೇವರೆಂದು ನಂಬಬೇಡ ಮೂಢನರನೆ ಎಂದು ಮೌಢ್ಯತೆಗೆ ಒಳಗಾದ ಮನುಷ್ಯನನ್ನು ಜಾಗೃತಗೊಳಿಸಿದ್ದಾರೆ.

**ಸಣ್ಣ ಹಾಡು ಹಕ್ಕಿ ಪಿಕಳಾರದಲ್ಲಿ ಕಂಡ ಭೂಮತ್ವ**

ಒಂದು ಸಣ್ಣ ಹಾಡುಹಕ್ಕಿ ಪಿಕಳಾರದ ದನಿ ಮಧುರವೂ ನಿಖರವೂ ಆಗಿರುತ್ತದೆ. ಪಿಕಾಳರವೇ Bulbul. ಅದು ಎಂಟ್ರೆನ್ಸ್ ವಿದ್ಯಾರ್ಥಿ 20ರ ಯುವಕ ಕುವೆಂಪು ಅವರಲ್ಲಿ ಉಂಟುಮಾಡಿದ ಸಹೃದಯ ಚಿದಾನುಭವ 'To A Bulbul'



ಕವನದಲ್ಲಿ ಚಿತ್ರಿತವಾಗಿದೆ. ಅವರಿಗೆ ಆ Bulbul ಹಕ್ಕಿ ಕಾಡಿನ ಮಧುರ ಕವಿ. ಸಂತಸ ಮತ್ತು ಹೊಳಪಿನಿಂದ ಎತ್ತರಕ್ಕೆ ಏರುತ್ತ ಗಗನ ಮುಟ್ಟುವ ಸಾಹಸಿ. ಅದು ಕವಿಗೆ ನಾದದ ನಲಿವು ನೀಡಿ ಭವ್ಯ ಸೃಷ್ಟಿಯ ಚುಂಬನದ ಅನುಭವ ನೀಡುವ – ಸ್ವರ್ಗದ ಮನೋಹರ ಚೇತನ, ನೆಲದ ಮೇಲಿನ ದೇವತೆ.

Fairest spirit of heaven,
Angel upon earth,
Unto me thou hast given
Melodies of mirth
That make me feel the kisses of a glorious birth!

1924ರ ಅವಧಿಯಲ್ಲಿ ಕುವೆಂಪು ಅವರು ರವೀಂದ್ರನಾಥ ಠಾಕೂರರ ಇಂಗ್ಲಿಷಿಗೆ ಭಾಷಾಂತರಗೊಂಡ ಕವನಗಳನ್ನು ಕನ್ನಡಕ್ಕೆ ತರಲು ಪ್ರಯತ್ನಿಸಿದ್ದಾರೆ. ಅದರಲ್ಲಿ ಕೆಲವು ಅವರ ಕವಿತಾಶಕ್ತಿಯ ವಿಕಾಸದ ಹೆಜ್ಜೆಗುರುತುಗಳಾಗಿವೆ. ಅದೇ ಸಮಯದಲ್ಲಿ ಬೈರನ್ ಕವಿಯ ಒಂದು ಕವನವನ್ನು 'ಮುದಿತನ' ಎಂಬ ಶೀರ್ಷಿಕೆಯಲ್ಲಿ ಭಾಮಿನೀ ಷಟ್ಪದಿಯಲ್ಲಿ ಬರೆದಿದ್ದಾರೆ.

## ಪ್ರಕೃತಿಯಾರಾಧನೆಯೇ ಪರಮನಾರಾಧನೆ

ಕುವೆಂಪು ಅವರು 1924ರಲ್ಲಿ ಹನ್ನೆರಡು ಪಂಕ್ತಿಗಳ ಹದಿನಾಲ್ಕು ಸೀಸ ಪದ್ಯಗಳ 'ಮಲೆನಾಡ ವೈಭವ' ಕವನ ರಚಿಸಿದ್ದಾರೆ. ಅದರಲ್ಲಿ ಮಲೆನಾಡಿನ ಚೆಲುವು, ಅದರ ಸೃಷ್ಟಿಕರ್ತ, ಅದನ್ನು ಕಂಡು ಮೈ ಮರೆಯುವ ಕವಿಯ ಬಣ್ಣನೆಯಿದೆ.

'ಎತ್ತಲುಂ ದಟ್ಟಮೆನೆ ಬೆಳೆದಿರ್ಪ ತಳಿರಿನಿ
ಬಿತ್ತರದ ಬೆಟ್ಟಗಳ್ ಕಂಗೊಳಿಪವು;
ಎತ್ತಲುಂ ಸಾಲು ಸಾಲಿಂದೆದ್ದು ವಿಶ್ವಮಂ
ಚಿತ್ತದೊಳ್ ಬಗೆಗೊಳಿಪ ಕಾನನಗಳು
ಹೃದಯದೊಳ್ ಸಂತೋಷಸಾಗರವನುಕ್ಕಿಸುತ'

ಎಂದು ಹೇಳುತ್ತ, ಆ ಮಲೆನಾಡಿನ ವೈಭವವನ್ನು ನೋಡುತ್ತ ತಮ್ಮ ಚಿತ್ತದಲ್ಲಿ ವಿಶ್ವವನ್ನು ಕಂಡಿದ್ದಾರೆ. ಅದರ ಅನುಭವದ ಆನಂದದಲ್ಲಿ ಮಿಂದಿದ್ದಾರೆ. ಅವರಿಗೆ ಹೇಮಂತ ಋತುವಿನಲ್ಲಿ ಆ ಬೆಟ್ಟಗಳು ಮಂಜಿನ ದಟ್ಟಿ ಉಟ್ಟಂತೆ ಕಾಣುತ್ತಿವೆ.

'ಬೆಟ್ಟ ತಾನುಟ್ಟಿರ್ಪ ದಟ್ಟಿಯೋ ಎಂಬಂತೆ
ದಟ್ಟ ಮಾಗಿಯ ಮಂಜು ಮೆರೆಯುತಿಹುದು'

ಮಲೆನಾಡಿನ ಬಹು ವಿಧದ ಸೊಬಗು, ರಮ್ಯ ಗಿರಿಗಳು, ತೊರೆಗಳು, ವನಗಳು, ರಂಜಿಸುವ ಆಗಸದ ಮೋಡಗಳು, ಭೂತಾಯಿಯನ್ನು ರಂಜಿಸುವ ಮರಗಿಡಬಳ್ಳಿಗಳ ಲತೆ ಹೂಗಳೊಡನೆ ಕವಿ ನಲಿವಿನಿಂದ ಆಡಿದ್ದಾರೆ. ಅವರು ಆ ವನಸ್ಥಳಗಳನ್ನು ಪ್ರೀತಿಯಿಂದ ಕಂಡು ಅವುಗಳೊಡನಿರುವ ದೇವನನ್ನು ಕಾಣಲು ಪ್ರಯತ್ನಿಸಿದ್ದಾರೆ. ಹಾಗಾಗಿ ಅವರಿಗೆ ಆ ಮಲೆನಾಡು,

'ಇದು ಪರಮ ಸೌಂದರ್ಯ ದೇವತೆಗೆ ನಿಜಭವನ.
ಮಿದು ವಿಶ್ವಶಿಲ್ಪಿಯಾಟದ ಭೂಮಿ; ಪರಮಕವಿ–
ಗಿದು ಸಕಲಮಂ ತೋರ್ಪ ಶಾಂತಿಯ ನಿಕೇತನಂ;
ಹೃದಯದಾಟದ ರಂಗಮಿದು ನಿಖಿಲ ಜೀವರಿಗೆ!

## ಪ್ರಕೃತಿಯಾರಾಧನೆಯ ಮನೋಹರ ಕವನಗಳು

ಆನಂದಮಯ ಈ ಜಗಹೃದಯ
ಏತಕೆ ಭಯ? ಮಾಣೊ!
ಸೂರ್ಯೋದಯ ಚಂದ್ರೋದಯ
ದೇವರ ದಯೆ ಕಾಣೊ!

**(ಆನಂದಮಯ ಜಗಹೃದಯ: ಪಕ್ಷಿಕಾಶಿ)**

ಶಿವಮಂದಿರಸಮ ವನಸುಂದರ ಸಮಶೃಂಗಾರದ ಗಿರಿಶೃಂಗಕೆ ಬಾ;
ಬಾ ಫಾಲ್ಗುಣ ರವಿ ದರ್ಶನಕೆ!

**(ಬಾ ಫಾಲ್ಗುಣ ರವಿದರ್ಶನಕೆ: ಪಕ್ಷಿಕಾಶಿ)**



ದೇವರು ರುಜು ಮಾಡಿದನು;
ರಸವಶನಾಗುತ ಕವಿ ಅದ ನೋಡಿದನು!
**(ದೇವರು ರುಜು ಮಾಡಿದನು: ಪಕ್ಷಿಕಾಶಿ)**

ಕದ್ದಿಂಗಳು: ಕಗ್ಗತ್ತಲು;
ಕಾರ್ಗಾಲದ ರಾತ್ರಿ.
ಸಿಡಿಲ್ಮಿಂಚಿಗೆ ನಡುಗುತ್ತಿದೆ
ಪರ್ವತ ವನಧಾತ್ರಿ.
**(ವರ್ಷ ಭೈರವ: ಪಕ್ಷಿಕಾಶಿ)**

ಅಡಿಯ ಗೆಜ್ಜೆ ನಡುಗೆ, ಹೆಜ್ಜೆಯಿಡುತ ಸುಗ್ಗಿ ಬರುತಿದೆ!
ಸುಗ್ಗಿ ಬರೆ ಹಿಗ್ಗಿತಿರೆ ಸಗ್ಗಸೊಗವ ತರುತಿದೆ!
**(ಸುಗ್ಗಿ ಬರುತಿದೆ: ಕೊಳಲು)**

ಅದೇ ವರ್ಷದಲ್ಲಿ ಅವರ ಮೊದಲ ಕನ್ನಡ ಪುಸ್ತಕ 'ಅಮಲನ ಕಥೆ' ಪ್ರಕಟವಾಯಿತು. ಅದು ಚೌಪದಿಗಳ ಶಿಶುಕಾವ್ಯ.

**ಮೂರು ಕಾಸು ದಕ್ಷಿಣೆ ನೀಡದಿರುವುದಕ್ಕೆ ತೀರ್ಥ ಕೊಡಲಿಲ್ಲ**

ಒಮ್ಮೆ ಕುವೆಂಪು ಅವರು ಸ್ನೇಹಿತರೊಡನೆ ಚಾಮುಂಡಿ ಬೆಟ್ಟಕ್ಕೆ ಹೋಗಿದ್ದರು. ದೇವರಿಗೆ ಪೂಜೆ ಮಾಡಿಸಲು ಹೋಗಿ ಕೈ ಮುಗಿದು ನಿಂತರು. ಪೂಜಾರಿ ಮಂಗಳಾರತಿ ತಟ್ಟೆಯಲ್ಲಿ ಉರಿಯುತ್ತಿದ್ದ ಕರ್ಪೂರ ಹಿಡಿದು ತೀರ್ಥ ನೀಡಲು ಪಂಚಪಾತ್ರೆಯೊಂದಿಗೆ ಬಂದನು. ಮೂರು ಕಾಸು ದಕ್ಷಿಣೆ ಹಾಕಿದವರಿಗೆ ಆತ ತೀರ್ಥ ನೀಡಿ ಜ್ಯೋತಿ ಬಳಿಗೆ ತಂದ. ಕುವೆಂಪು ಬಳಿ ಯಾವ ಹಣವೂ ಇರಲಿಲ್ಲ. ಪೂಜಾರಿ ತೀರ್ಥ ನೀಡದೆ, ಜ್ಯೋತಿ ತೋರದೆ ಮುಂದೆ ಹೋದ.

ಅದನ್ನು ಕಂಡು ನೊಂದ ಸ್ನೇಹಿತರೊಬ್ಬರು ಮೂರು ಕಾಸನ್ನು ತಟ್ಟೆಗೆ ಹಾಕಿದಾಗ ಪೂಜಾರಿ ವಿದ್ಯಾರ್ಥಿ ಕುವೆಂಪು ಅವರಿಗೆ ತಟ್ಟೆ ಎತ್ತಿ ಹಿಡಿದು ತೀರ್ಥ

ಕೊಡಲು ಬಂದ. ಆಗ ಕುವೆಂಪು ಅದನ್ನು ಸ್ವೀಕರಿಸದೆ ನಗುನಗುತ್ತ ಹೇಳಿದರು – 'ಅಲ್ಲಿ ಕೆಳಗೆ ಕೆರೆಯಲ್ಲಿ ನೀರಿದೆ. ಅವಶ್ಯಬಿದ್ದರೆ ಅದನ್ನೆ ತೆಗೆದುಕೊಳ್ಳುತ್ತೇನೆ', ಪೂಜಾರಿ ಹೊರಟುಹೋದ.

ಇದು ವಿದ್ಯಾರ್ಥಿ ಕುವೆಂಪು ಅವರ ನಿರಂಕುಶಮತಿಯ ನಡೆ. ಅಂದಿನಿಂದ ಅವರು ಯಾವ ದೇವಸ್ಥಾನಕ್ಕೂ ಪೂಜೆಗೆ ಹೋಗಲಿಲ್ಲ.

ಅವರು ರಾತ್ರಿಯ ಹೊತ್ತು ಚಾಮುಂಡಿ ಬೆಟ್ಟದ ಮೇಲೆ ಉರಿಯುವ ವಿದ್ಯುದ್ದೀಪ ಕುರಿತು 'The lights on Chamundi Hill' ಎಂದು ಒಂದು ಕವನ ರಚಿಸಿದ್ದಾರೆ. ಬೆಟ್ಟವನ್ನು ಏರುವಾಗ 'ಜೀವ ದೇವನೆಡೆಗೇರುವ ಸಾಹಸಕ್ಕೆ ಪ್ರತಿಮೆಯಾಗಿ' 'On the way to Chamundi Hills' ಎಂಬ ಇನ್ನೊಂದು ಕವನ ರಚಿಸಿದ್ದಾರೆ.

**'ತಾನಾಜಿ' ಲಾವಣಿ ಮತ್ತು 'ಕರ್ನಾಟಕದ ನಾಡಗೀತೆ'**

1925ರಲ್ಲಿ ಕುವೆಂಪು ಅವರು ಇಂಗ್ಲಿಷಿನ ಬ್ಯಾಲೆಡ್ (Balled) ಛಂದಸ್ಸಿನಲ್ಲಿ 'ತಾನಾಜಿ' ಎಂಬ ವೀರಗೀತೆಯನ್ನು ಇಂಗ್ಲಿಷಿನಲ್ಲಿ ರಚಿಸಿದರು. ಅದನ್ನು ಲಾವಣಿ ಶೈಲಿಯಲ್ಲಿ ಕನ್ನಡಕ್ಕೂ ಅನುವಾದಿಸಿದರು. ಅದು ಅವರ ಪ್ರಾಯೋಗಿಕ ರಚನಾ ರೂಪಗಳಾಗಿದ್ದವು. ಅಂತಹ ಹಲವಾರು ಅಪ್ರಕಟಿತ ಇಂಗ್ಲಿಷ್ ಮತ್ತು ಕನ್ನಡದ ಕವನಗಳನ್ನು ನೆನಪಿನ ದೋಣಿಯಲ್ಲಿ ನೀಡಿದ್ದಾರೆ. ಅವರು ಪ್ರೌಢಚಿಂತನೆಯಲ್ಲಿ 1936ರಲ್ಲಿ 'ತಾನಾಜಿ' ಎಂಬ ದೀರ್ಘ ಕವಿತೆ ಬರೆದಿದ್ದು ಅದು 'ಕಥನ ಕವನಗಳು' ನಲ್ಲಿ ಪ್ರಕಟವಾಗಿದೆ. ಅದು ಶಿವಾಜಿಯ ದಳಪತಿ ತಾನಾಜಿ ಸಿಂಹಗಡವನ್ನು ಹಿಡಿದ ಸಾಹಸ ಕಥೆ. ಅದನ್ನು ಅವರು 1930ರಲ್ಲಿ ಕಾಲೇಜಿನಲ್ಲಿ ತೀ. ನಂ. ಶ್ರೀಕಂಠಯ್ಯ ಮತ್ತು ವಿ. ಸೀತಾರಾಮಯ್ಯನವರಿಗೆ ಓದಿ ಹೇಳಿದರು. ಅದೇ ವರ್ಷ ಮಹಾರಾಜ ಕಾಲೇಜಿನ ಯೂನಿಯನ್‌ನಲ್ಲಿ ಲಾವಣಿ ಧಾಟಿಯಲ್ಲಿ ತುಸು ರಾಗವಾಗಿ ಓದಿದರು. ಅದರ ಪ್ರಸಿದ್ಧಿ ಕಾಲೇಜಿನ ತುಂಬ ಹಬ್ಬಿ ಬಿಟ್ಟಿತು. ಪ್ರೊ॥ ವೆಂಕಣ್ಣಯ್ಯನವರಿಗೆ



ಹೀಗ್ಗಾಯಿತು. ಕುವೆಂಪು ಅವರಿಗೆ ಪ್ರೊ॥ ಟಿ.ಎಸ್ ವೆಂಕಣ್ಣಯ್ಯನವರು ಎಂ.ಎ. ತರಗತಿಯಲ್ಲಿ ಪ್ರಾಧ್ಯಾಪಕರಾಗಿದ್ದರು. ಅವರ ಬಗ್ಗೆ ತುಂಬಾ ಗೌರವ ಹೊಂದಿದ್ದ ಕುವೆಂಪು ತಮ್ಮ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯವನ್ನು ಅವರಿಗೆ ಅರ್ಪಿಸಿದ್ದಾರೆ.

ಕುವೆಂಪು ಅವರು 1924–25ರಲ್ಲಿ ರವೀಂದ್ರರ 'ಜನ ಗಣ ಮನ'ದಂತೆ ಕನ್ನಡ ನಾಡಿಗೆ ಕರ್ನಾಟಕ ರಾಷ್ಟ್ರಗೀತೆ ರಚಿಸಿದರು. ಅದು 'ಕೊಳಲು' ಕವನ ಸಂಗ್ರಹದಲ್ಲಿ ಅಚ್ಚಾಗಿತ್ತು. ಅನಂತರ 1973ರಲ್ಲಿ ಸರ್ಕಾರವು ನಾಡಿಗೆ 'ಕರ್ನಾಟಕ' ಎಂದು ಹೆಸರಿಟ್ಟಿತ್ತು, 2004ರಲ್ಲಿ ಅದನ್ನು 'ನಾಡಗೀತೆ'ಯಾಗಿ ಅಂಗೀಕರಿಸಿತು. ಅದು ಇಂದು ಜನಮನದಲ್ಲಿ ಒಂದಾಗಿದೆ. ಕುವೆಂಪು ಅವರು ಕನ್ನಡ ನಾಡು ನುಡಿಯ ಅಭಿಮಾನವನ್ನು ಕನ್ನಡಿಗರಲ್ಲಿ ಉಂಟಾಗುವಂತೆ ಮಾಡಿದ ಕವಿ. ಅವರ ಕವನಗಳಿಂದ ಕನ್ನಡ ಯುವ ಮನಸ್ಸು ಕನ್ನಡ ದೀಕ್ಷಾಬದ್ಧವಾದದ್ದು ಕನ್ನಡ ನಾಡಿನ ಪುಣ್ಯ. ಅವರು ಕನ್ನಡಿಗರಿಗೆ ಕನ್ನಡದ ಕರೆಕೊಟ್ಟು ಅವರಲ್ಲಿ ಕನ್ನಡತನ ಪ್ರಜ್ವಲಿಸುವಂತೆ ಮಾಡಿದ ಕವನಗಳು ಹಲವಾರು. ಅವುಗಳಲ್ಲಿ ಕೆಲವು ಸಾಲುಗಳು:

ದೀಕ್ಷೆಯ ತೊಡು ಇಂದೇ
ಕಂಕಣ ಕಟ್ಟಿಂದೇ!
ಕನ್ನಡ ನಾಡೊಂದೇ
ಇನ್ನೆಂದೂ ತಾನೊಂದೇ

**(ಕರ್ನಾಟಕ ಮಂತ್ರದೀಕ್ಷೆ: ಇಕ್ಷು ಗಂಗೋತ್ರಿ)**

ಜಯ್ ಭಾರತ ಜನನಿಯ ತನುಜಾತೆ
ಜಯಹೇ ಕರ್ಣಾಟಕ ಮಾತೆ!
ಜಯ್ ಸುಂದರ ನದಿ ವನಗಳ ನಾಡೆ,
ಜಯ ಹೇ ರಸ ಋಷಿಗಳ ಬೀಡೆ!

**(ಜಯಹೇ ಕರ್ನಾಟಕ ಮಾತೆ!: ಕೊಳಲು)**



ಬಾರಿಸು ಕನ್ನಡ ಡಿಂಡಿಮವ,
ಓ ಕರ್ನಾಟಕ ಹೃದಯಶಿವ!

ಸತ್ತಂತಿಹರನು ಬಡಿದೆಚ್ಚರಿಸು,
ಕಚ್ಚಾಡುವರನು ಕೂಡಿಸಿ ಒಲಿಸು,
ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು;
ಒಟ್ಟಿಗೆ ಬಾಳುವ ತೆರದಲಿ ಹರಸು.

**(ಬಾರಿಸು ಕನ್ನಡ ಡಿಂಡಿಮವ: ಪ್ರೇತಕ್ಯೂ)**

ಎಲ್ಲಾದರು ಇರು; ಎಂತಾದರು ಇರು;
ಎಂದೆಂದಿಗು ನೀ ಕನ್ನಡವಾಗಿರು.
ಕನ್ನಡ ಗೋವಿನ ಓ ಮುದ್ದಿನ ಕರು
ಕನ್ನಡತನವೊಂದಿದ್ದರೆ ನೀ ನಮ್ಮಗೆ ಕಲ್ಪತರು.

ನೀ ಮೆಟ್ಟುವ ನೆಲ–ಅದೆ ಕರ್ನಾಟಕ;
ನೀನೇರುವ ಮಲೆ–ಸಹ್ಯಾದ್ರಿ,
ನೀ ಮುಟ್ಟುವ ಮರ–ಶ್ರೀಗಂಧದ ಮರ;
ನೀ ಕುಡಿಯುವ ನೀರ್–ಕಾವೇರಿ

**(ಮೆಟ್ಟುವ ನೆಲ ಕರ್ನಾಟಕ : ಕೋಗಿಲೆ ಮತ್ತು ಸೋವಿಯತ್ ರಷ್ಯಾ)**

## ಅಧ್ಯಯನ ಹಾಗೂ ಕವನ ರಚನಾ ಕೃಷಿ

ಕುವೆಂಪು ವಿದ್ಯಾರ್ಥಿ ದೆಸೆಯಲ್ಲಿ ತಾವು ಓದುತ್ತಿದ್ದ ಇಂಗ್ಲಿಷ್ ಕವನಗಳನ್ನು ಭಾಷಾಂತರಿಸಲು ಸಾಧ್ಯವೆಂದು ತೋರಿದಾಗ ಭಾಷಾಂತರಿಸುತ್ತಿದ್ದರು. ಪ್ರಾನ್ಸಿನ ಕಾರ್ನಪೋರ್ಡ್‌ನ 'The France' 'ನಡುಹಗಲು' ಆಗಿ, ಡಬ್ಲ್ಯು ಎಸ್. ಲ್ಯಾಂಡರ್‌ನ ಒಂದು ಕವನ 'ಓಡುವ ಸುಖಗಳು' ಆಗಿ ಭಾಷಾಂತರವಾಗಿವೆ.



ಈಗಾಗಲೇ ತಿಳಿದಿರುವಂತೆ ಅವರ ಕವನಗಳು ಮೈಸೂರಿನ ದಿನಪತ್ರಿಕೆ 'ಸಂಪದಭ್ಯುದಯ'ದಲ್ಲಿ ಪ್ರಕಟವಾಗುತ್ತಿದ್ದವು. ಅವರ 'ತವರೂರು' ಕವನ ಧಾರವಾಡದ ಆಲೂರು ವೆಂಕಟರಾಯರ 'ಜಯಕರ್ನಾಟಕ' ಪತ್ರಿಕೆಯಲ್ಲಿ 1925ರಲ್ಲಿ ಪ್ರಕಟವಾಯಿತು. 'ಕಿಶೋರಚಂದ್ರ ವಾಣಿ' ಕಾವ್ಯನಾಮದಲ್ಲಿ ಪ್ರಕಟವಾಗಿದ್ದು, ಅದು ಅವರಿಗೆ ಹಿಗ್ಗಿನ ವಿಷಯವಾಗಿತ್ತು.

ಮನೆಯಿಂದ ಬರುತ್ತಿದ್ದ M.O ಹಣದಲ್ಲಿ ಅವರು ಪಠ್ಯೇತರ ಪುಸ್ತಕಗಳನ್ನು ಕೊಂಡು ಓದುತ್ತಿದ್ದರು. ಹಾಗೆ ಕೊಂಡುಕೊಂಡ ಪುಸ್ತಕಗಳು: ಹಿಂದೂ ಎಥಿಕ್ಸ್, ಕ್ಯಾಂಟ್, ಪಂಪ ರಾಮಾಯಣ, ರಾಜಶೇಖರ ವಿಲಾಸ, ಟಾಲ್‌ಸ್ಟಾಯ್‌ರ ಕಾದಂಬರಿಗಳು, ಇಂಗ್ಲಿಷ್ ಕವಿಗಳ ಕಂಪ್ಲೀಟ್ ವರ್ಕ್ಸ್, ಸ್ವಾಮಿವಿವೇಕಾನಂದ ಭಾಷಣ ಲೇಖನಗಳ ಸಂಗ್ರಹ, World classics ನ ಪುಸ್ತಕ ಶ್ರೇಣಿ ಮುಂತಾದವುಗಳು.

ಕುವೆಂಪು ಅವರಂತೆ ವೈ.ಎಂ. ಶ್ರೀಕಂಠಯ್ಯ ಅವರು ತತ್ವಶಾಸ್ತ್ರವನ್ನು ಐಚ್ಛಿಕವಾಗಿ ತೆಗೆದುಕೊಂಡಿದ್ದರು. ಆ ಗೆಳೆಯನೊಂದಿಗಿನ ಸಂಭಾಷಣೆಯ ತುಣುಕು ಹೀಗಿತ್ತು.

Y. M. asked me: What is in your pocket?
I replied that there is Brahmananda (universe)
He asked 'Have you brought anything to eat'
'Yes', I said 'I have brought you flowers of songs',
He laughed.

ಇದೆಲ್ಲವೂ ಅವರು ಬರೆದ ದಿನಚರಿಯಲ್ಲಿತ್ತು. ಅವರು ತಪ್ಪದೆ ದಿನಚರಿ ಬರೆಯುತ್ತಿದ್ದರು. ಅವರು ದಿನಚರಿ ಬರೆಯುವುದರಿಂದ ತಮ್ಮ ಅಂತರವಲೋಕನಕ್ಕೆ ತುಂಬಾ ಸಹಾಯವಾಗುತ್ತದೆ ಎಂದು ತಿಳಿದಿದ್ದರು. ಅವರು 'ಯಂಗ್ ಇಂಡಿಯಾ', 'ವೇದಾಂತ ಕೇಸರಿ' ಸಂಚಿಕೆಗಳನ್ನು ಓದುತ್ತಿದ್ದರು. ಅವರು





ಸಹಪಾಠಿಗಳಿಗೆ ಕೋಲರಿಜ್, ವರ್ಡ್ಸ್‌ವರ್ತ್ ಮುಂತಾದ ಕವಿಗಳ ಇಂಗ್ಲಿಷ್ ಕವನಗಳನ್ನು ಓದಿ ವಿವರಿಸುತ್ತಿದ್ದರು. ತಾವು ರಚಿಸಿದ ಕವನಗಳನ್ನು ತಾವೆ ಹಾಡುತ್ತಿದ್ದರು. ಅವರು ಕಾಲೇಜಿನ ಚರ್ಚಾಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದರು.

## ಮೈಸೂರು ಶ್ರೀರಾಮಕೃಷ್ಣಾಶ್ರಮದ ಸ್ವಾಮಿ ಸಿದ್ಧೇಶ್ವರಾನಂದರ ಕೃಪೆ

ಕುವೆಂಪು ಅವರ ಪುಟ್ಟ ಕೃತಿ 'Beginners Muse' ಸ್ಥಳೀಯ ವ್ಯಾಪ್ತಿಯ ಖ್ಯಾತಿ ಪಡೆದಿತ್ತು. 'ಸಂಪದಭ್ಯುದಯ' ದಿನ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದ ಅವರ ಕವನಗಳು ಮೈಸೂರಿನ ಪತ್ರಿಕಾ ವಾಚಕರ ಗಮನ ಸೆಳೆದಿತ್ತು. ಅವುಗಳ ಕೀರ್ತಿಯ ಕಾರಣದಿಂದ ಅವರಿಗೆ 1926 ಜನವರಿಯಲ್ಲಿ ಬನುಮಯ್ಯ ಹೈಸ್ಕೂಲಿನಲ್ಲಿ ನಡೆದ ಸ್ವಾಮಿ ವಿವೇಕಾನಂದ ಜನ್ಮೋತ್ಸವದ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಲು ಆಹ್ವಾನ ಬಂದಿತ್ತು. ಅವರು ಲೋಟಸ್ ಯೂನಿಯನ್ ಸ್ನೇಹಿತರೊಡನೆ ಸಭಾಂಗಣಕ್ಕೆ ಹೋದರು. ಅವರ ಕರ್ನಾಟಕ ರಾಷ್ಟ್ರಗೀತೆಯಿಂದ ಕಾರ್ಯಕ್ರಮ ಪ್ರಾರಂಭವಾಯಿತು. ಬನುಮಯ್ಯ ಹೈಸ್ಕೂಲಿನ ಮೇಷ್ಟ್ರು ನಾ.ಕಸ್ತೂರಿ ಭಾಷಣ ಮಾಡಿದರು. ಅಲ್ಲಿ ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷ ಸ್ವಾಮಿ ಸಿದ್ದೇಶ್ವರಾನಂದರು ಕುವೆಂಪುವನ್ನು ಗಮನಿಸಿದರು. ಅನಂತರ ಸ್ನೇಹಿತರೊಡನೆ ಆಶ್ರಮಕ್ಕೆ ಬರುವಂತೆ ಹೇಳಿ ಕಳುಹಿಸುತ್ತಿದ್ದರು.

1926 ಪೆಬ್ರವರಿಯಲ್ಲಿ ಕುವೆಂಪು ಶ್ರೀರಾಮಕೃಷ್ಣ ಆಶ್ರಮಕ್ಕೆ ಹೋಗಿ ಸ್ವಾಮಿ ಸಿದ್ದೇಶ್ವರಾನಂದರನ್ನು ಕಂಡರು. ಆ ಮಧುರ ಕ್ಷಣವನ್ನು ಅವರು ಹೀಗೆ ದಾಖಲಿಸಿದ್ದಾರೆ. 'ನನಗೆ ಅತಿ ಹತ್ತಿರ ಕುಳಿತು ಸಂವಾದಿಸುತ್ತಿದ್ದ ಅವರ ಮಾತೃ ಪ್ರೇಮ ಸ್ವರೂಪದ ಭ್ರಾತೃಸ್ನೇಹದ ಅಹೈತುಕವಾದ ದೈವೀ ವಿಶ್ವಾಸದ ಆನಂದಮಯ ಆವರ್ತಗರ್ತಕ್ಕೆ ಸಿಕ್ಕಿಬಿಟ್ಟಿತು ನನ್ನ ಚೈತನ್ಯ ನೌಕೆ... ಬುದ್ಧಿಗಲ್ಲದಿದ್ದರೂ ನನ್ನ ಜೀವಾತ್ಮಕ್ಕೆ, ಪರಕೀಯವಾದಂತಿದ್ದ ಈ ಲೋಕದಲ್ಲಿ, ಸ್ವಕೀಯರೊಬ್ಬರು ಸಿಕ್ಕಿದಂತಾಗಿ, ಏನೋ ಅನಿರ್ದೇಶ್ಯ ಧೈರ್ಯವೊಂದು ನನ್ನನ್ನು ಆತುಕೊಂಡಿತ್ತು ದಿಕ್ಕಿಲ್ಲದ ಚೇತನಕ್ಕೆ ದಿಕ್ಕಾಗಿ' (ನೆ.ದೋ. ಪು 581, 582)



ಸ್ವಾಮಿ ಸಿದ್ದೇಶ್ವರಾನಂದರನ್ನು ಸಂದರ್ಶಿಸಿದ ದಿನವೆ 'ಸ್ವಾಮಿ ವಿವೇಕಾನಂದ' ಕವನ ರಚಿಸಿದರು.

ಶ್ರೀ ವಿವೇಕಾನಂದನೆ । ಬ್ರಹ್ಮಾನಂದನೆ
ನಿನಗೆ ಪರಮ ಮಂಗಳಂ । ಓಂ ಓಂ ಮಂಗಳಂ ॥ಪ॥

* * *

ಭೇದ ಮಾರಿಯ । ಭೇದಿಸಾಡಿದ
ವೇದ ಮಾರ್ಗದ । ವೀರಸಿಂಹನೆ... ಶ್ರೀ...

ಅದೇ ತಿಂಗಳಲ್ಲಿ ಬನುಮಯ್ಯ ಹೈಸ್ಕೂಲಿನಲ್ಲಿ ನಡೆದ ಶ್ರೀರಾಮಕೃಷ್ಣ ಜನ್ಮೋತ್ಸವದಲ್ಲಿ ಕುವೆಂಪು ಭಾಗವಹಿಸಿದ್ದರು. ಸಮಾರಂಭದ ಪ್ರಾರಂಭದಲ್ಲಿ 'ಎಲ್ಲಿಹೆ?' 'ಎಂತಿಹೆ?' ಎಂಬ ಎರಡು ಕವನಗಳನ್ನು ರಾಗವಾಗಿ ವಾಚಿಸಿದರು. ಅದೇ ತಿಂಗಳ ಒಂದು ದಿನ ಸ್ವಾಮಿ ಸಿದ್ದೇಶ್ವರಾನಂದರು ಪುಟ್ಟಪ್ಪನವರ ದೀನ ನಿವಾಸಕ್ಕೆ ಬಂದು ಪವಿತ್ರಗೊಳಿಸಿದರು. ಸೊಂಟದ ಎತ್ತರದ ಬೀರುವಿನಲ್ಲಿದ್ದ ಸಾಹಿತ್ಯ ಅಧ್ಯಾತ್ಮ ಪುಸ್ತಕಗಳನ್ನು ಕಂಡು ಮೆಚ್ಚಿಗೆ ವ್ಯಕ್ತಪಡಿಸಿದರು. ಆ ಆನಂದಭವನ ಕೊಠಡಿಯಿಂದ ಸಂತೆಪೇಟೆ ಸನ್ನಿವೇಶ–ಬರಿಯ ದಿನಸಿ, ಗಾಡಿ, ಧೂಳಿ, ಘಾಟು, ಮೆಣಸಿನಕಾಯಿ, ಕೊತ್ತಂಬರಿ, ಹುರುಳಿ ಮೂಟೆಗಳು; ಗೊಂದಲ, ಗಲಾಟೆ, ಅದನ್ನು ನೋಡಿದ ಸ್ವಾಮೀಜಿ ದುಃಖದಿಂದ ಹೇಳಿದರು: 'Puttappa how can a poet like you live in this dingy place?'.

ಸಂತೆಪೇಟೆ ಕೊಠಡಿಯ ಹೊಲಸು ತಿಗಣೆ ಸೊಳ್ಳೆಕಾಟ ತಡೆಯಲಾರದೆ ಜಗನ್ಮಾತೆಯನ್ನು ತಾಯಿ! ಸುಖ ದುಃಖಗಳನ್ನು ಸಮಚಿತ್ತದಿಂದ ಸಹಿಸಲು ತನಗೆ ಬಲವನ್ನು ದಯಪಾಲಿಸು! ಎಂದು ಕುವೆಂಪು ಪ್ರಾರ್ಥಿಸುತ್ತಿದ್ದರು.

ಆ ವರ್ಷದಲ್ಲಿ ಅವರು ರಚಿಸಿದ ಪುಟ್ಟ ಮಕ್ಕಳ ನಾಟಕ 'ಮೋಡಣ್ಣನ ತಮ್ಮ' ಪ್ರಕಟವಾಯಿತು. ಅದೊಂದು ಸಾಮಾಜಿಕ ನಾಟಕ.

ಅವರು ಆಗಾಗ್ಗೆ ಶ್ರೀರಾಮಕೃಷ್ಣ ಆಶ್ರಮಕ್ಕೆ ಹೋಗುತ್ತಿದ್ದರು. ಅದನ್ನು ಅವರು 'ಆಶ್ರಮಕ್ಕೆ ಹೋದಾಗಲೆಲ್ಲ ಒಂದು ಅಧ್ಯಾತ್ಮಿಕ ತೀರ್ಥಯಾತ್ರೆಯಾಗುತ್ತಿತ್ತು. ನನ್ನ ಚೇತನಕ್ಕೆ' ಎಂದು ನೆನೆದಿದ್ದಾರೆ.

### ಶ್ರೀರಾಮಕೃಷ್ಣಾಶ್ರಮದ ಬಡವರ ನಿಧಿಗೆ ಹಣ ಸಂಗ್ರಹ

ಕುವೆಂಪು ಅವರು ಶ್ರೀರಾಮಕೃಷ್ಣ ಆಶ್ರಮದ ದರಿದ್ರ ನಾರಾಯಣ ಸೇವೆಗಾಗಿ ಸ್ನೇಹಿತರಿಂದ, ಪ್ರೊಫೆಸರ್‌ಗಳಿಂದ ಹಣ ಸಂಗ್ರಹಿಸುತ್ತಿದ್ದರು. ಪ್ರೊ. ವಾಡಿಯಾ ಅವರ ಜೊತೆ ತರಗತಿಯಲ್ಲಿ ತತ್ವಶಾಸ್ತ್ರದ ಸೂಕ್ಷ್ಮ ವಿಚಾರವನ್ನು ಮುಕ್ತವಾಗಿ ಚರ್ಚಿಸುತ್ತಿದ್ದರು. ಜೊತೆಗೆ ಶ್ರೀರಾಮಕೃಷ್ಣಾಶ್ರಮದ ಬಡವರ ಸೇವಾನಿಧಿಗೆ ಚಂದಾ ಹಣವಾಗಿ ರೂ.4, ರೂ.5 ಸಂಗ್ರಹಿಸುತ್ತಿದ್ದರು.

ತತ್ವ ಮತ್ತು ಸಾಹಿತ್ಯ ಕುರಿತು ಗೆಳೆಯರೊಡನೆ ಮಾತನಾಡುತ್ತಿದ್ದರು. ಸ್ನೇಹಿತರೊಡನೆ ಪರೀಕ್ಷೆಗಾಗಿ ಸಹಾಧ್ಯಯನ ಮಾಡುತ್ತಿದ್ದರು. ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಕಾಲೇಜು ವಿದ್ಯಾಭ್ಯಾಸ ಮುಂದುವರಿಸಿದರು. ಶ್ರೀರಾಮಕೃಷ್ಣಾಶ್ರಮ ಅವರ ಬಾಳಿನ ಕೇಂದ್ರವಾಗಿತ್ತು. ಸಿದ್ದೇಶ್ವರಾನಂದ, ನಾ. ಕಸ್ತೂರಿ, ತಾತಗಾರು ವೆಂಕಟಸುಬ್ಬಯ್ಯ ನೀಡುತ್ತಿದ್ದ ಪ್ರೋತ್ಸಾಹ ಅವರ ಪ್ರತಿಭೆಗೆ ಸ್ಫೂರ್ತಿದಾಯಕ ಅಮೃತವಾರಿಯಾಗಿತ್ತು. ವಿದ್ಯಾರ್ಥಿಯಾಗಿ ತಮ್ಮ ಜ್ಞಾನಾಗ್ನಿಯನ್ನು ಅಧ್ಯಯನದಿಂದ, ಏಕಾಗ್ರತೆಯಿಂದ ಪ್ರಜ್ವಲಿಸಿಕೊಳ್ಳುತ್ತ ವಿದ್ಯೆಯನ್ನು ಕರಗತ ಮಾಡಿಕೊಳ್ಳುವ ಸಾಧನಾ ಪಥದಲ್ಲಿ ಯಶಸ್ವಿಯಾಗಿದ್ದರು.

### ಶ್ರೀರಾಮಕೃಷ್ಣಾಶ್ರಮದ ಅಭಯ ಸಾನ್ನಿಧ್ಯದಲ್ಲಿ ಕುವೆಂಪು

ಸಂತೇಪೇಟೆಯ ಆನಂದಭವನ ಹೋಟೆಲಿನ ಉಪ್ಪರಿಗೆಯ ಕೊಠಡಿಯ ವಾಸ ಅವರಿಗೆ ತುಂಬಾ ಕಷ್ಟಕರವಾಗಿತ್ತು. ಹೋಟೆಲಿನ ಆಹಾರದೋಷದಿಂದಲೂ, ಸಂಪರ್ಕ ಮಾಲಿನ್ಯದಿಂದಲೂ ರಕ್ತ ಕೆಟ್ಟು ಕಜ್ಜಿ ಕುರು ನಿತ್ಯ ಸಂಗಾತಿಗಳಾಗಿದ್ದವು. ಊರಿಗೆ ಹೋಗಿಬಂದ ಮೇಲೆ ಮಲೇರಿಯಾ ಜ್ವರಗಡ್ಡೆ ಭಾದಿಸುತ್ತಿತ್ತು. ಜೊತೆಗಿದ್ದ



ತಿಮ್ಮಯ್ಯ, ಮಾನಪ್ಪ ಓದು ಬಿಟ್ಟು ಮನೆ ಸೇರಿದ್ದರು. ಜ್ವರ ಪೀಡಿತರಾಗಿ ರೂಮಿನಲ್ಲಿ ಒಬ್ಬರೇ ಇದ್ದರು. ಎದ್ದೇಳಲೂ ಆಗದೆ ಯಾರಿಗೆ ಏಕೆ ತೊಂದರೆ ಕೊಡುವುದು ಎಂದುಕೊಂಡು ಜಗಜ್ಜನನಿಯ ಮೇಲೆ ಭಾರಹಾಕಿ ಪ್ರಾರ್ಥಿಸುತ್ತಿದ್ದರು.

ಸಿದ್ದೇಶ್ವರಾನಂದರು ಹಲವಾರು ದಿನಗಳಿಂದ ಕುವೆಂಪು ಆಶ್ರಮಕ್ಕೆ ಬಾರದಿರುವುದರ ಕಾರಣ ತಿಳಿಯಲು ಓರ್ವ ಸ್ಕೌಟ್ಸ್ ವಿದ್ಯಾರ್ಥಿಯನ್ನು ಕಳುಹಿಸಿದರು. ಆತನಿಂದ ಜ್ವರ ಬಂದು ಕುವೆಂಪು ಹಾಸಿಗೆ ಹಿಡಿದಿರುವುದು ತಿಳಿದರು. ಒಂದು ಸಂಜೆ ಸ್ವಾಮೀಜಿ, ಕಸ್ತೂರಿ, ತಾತಗಾರು ಮೆಟ್ಟಲು ಏರಿ ಕೊಠಡಿಗೆ ಬಂದರು. ಸ್ವಾಮೀಜಿ ಅವರ ಮಾತಿಗೆ ಒಪ್ಪಿದ ಕುವೆಂಪು ಕೃಷ್ಣರಾಜೇಂದ್ರ ಆಸ್ಪತ್ರೆಗೆ ನವೆಂಬರ್ 1926ರಲ್ಲಿ ಸೇರಿದರು. ಕ್ರಾನಿಕ್ ಮಲೇರಿಯಾ ಆಗಿತ್ತು.

ಕುವೆಂಪು ಚೇತರಿಸಿಕೊಳ್ಳಲು ಅವರನ್ನು ಸ್ವಾಮೀಜಿಗಳು ಆಸ್ಪತ್ರೆಯಿಂದ ಶ್ರೀರಾಮಕೃಷ್ಣಾಶ್ರಮಕ್ಕೆ ಕರೆದೊಯ್ದರು. ಅದನ್ನು ಕುವೆಂಪು 'ನನ್ನ ಬದುಕಿನ ಒಂದು ಮಹಾ ದಿವ್ಯ ಅಧ್ಯಾಯ ಪ್ರಾರಂಭವಾಯಿತು!' ಎಂದು ನೆನೆದಿದ್ದಾರೆ. ದೊಡ್ಡ ಚಿಕ್ಕಪ್ಪ ವಿಷಯ ತಿಳಿಯಲು ತಿಮ್ಮಯ್ಯ ಮತ್ತು ದೇವಂಗಿ ಮಾನಪ್ಪನನ್ನು ಕಳಿಸಿದರು. ಸ್ವಾಮೀಜಿಯ ಅಕ್ಕರೆಗೆ ಸೋತುಹೋದ ದೇವಂಗಿ ಮಾನಪ್ಪ ಅವರ ಶಿಷ್ಯನಾಗಿ ಹೋದ. ಕುವೆಂಪು ಸಂತೇಪೇಟೆ ರೂಮು ಖಾಲಿ ಮಾಡಿ ಆಶ್ರಮದಲ್ಲಿಯೇ ಉಳಿದರು. ಅವರ ಚೇತನಕ್ಕೆ ಆಶ್ರಮದ ವಾತಾವರಣವೆಲ್ಲ ಒಂದು ಪವಿತ್ರ ಅಭಯ ಸಾನ್ನಿಧ್ಯವಾಗಿತ್ತು.

ರೋಗ ಶಯನದೊಳಿದ್ದಾಗ ಅವರು ರಚಿಸಿದ ದೀರ್ಘ ಕವನ 'ಹಾಳೂರು'. ಅದು ಅವರು ಹಿಂದೆ ಓದಿದ್ದ ಗೋಲ್ಡ್ ಸ್ಮಿತ್‌ನ 'Deserted Village' ಪ್ರಭಾವದಿಂದ ಬರೆದದ್ದು. ಭಾಷಾಂತರವಲ್ಲ. ಅದೇ ಅವಧಿಯಲ್ಲಿ ಬರೆದ ಕವನಗಳೆಂದರೆ; 'ಮುದ್ದುಹೂಗಳೆ', 'ಒಂದು ರಹಸ್ಯವು ಪೀಡಿಪುದೆನ್ನ', 'ಹೂದೋಟ', 'ಸುಖವಿಲ್ಲವೆನಬೇಡ', 'ಆಟ ಮುಗಿಯುವ ಮುನ್ನ', 'ಮಡಿವಾಳ' ಮುಂತಾದ ಕವನಗಳು.

ಸ್ವಾಮೀಜಿಯವರ ಶುಶ್ರೂಷೆಯಿಂದ ಕುವೆಂಪು ಚೇತರಿಸಿಕೊಂಡರು. ಸ್ವಾಮೀಜಿಯವರು ಅವರನ್ನು ಆಶ್ರಮಕ್ಕೆ ಕರೆದೊಯ್ದುದು ಸಂನ್ಯಾಸಿಯನ್ನಾಗಿ ಮಾಡಲು ಅಲ್ಲ ಎಂಬುದು ಅವರ ಊರಿನವರಿಗೆ ಮನದಟ್ಟು ಮಾಡಲು ಕುಪ್ಪಳಿಗೆ ಕಳುಹಿಸಿದರು. ಅವರು ಊರಿಗೆ ಹೋಗುವ ಮೊದಲು ಶಿವಮೊಗ್ಗೆಯಲ್ಲಿ ತಂಗಿದ್ದಾಗ ಭೂಪಾಳಂ ಚಂದ್ರಶೇಖರಯ್ಯ ಮೊದಲಾದ ಮಿತ್ರರೊಂದಿಗೆ ಹರಟೆ, ಹೊಸಕವನ ರಚನೆಯ ವಾಚನದಲ್ಲಿ ನಕ್ಕು ನಲಿದರು. ಅವರು ದೀರ್ಘಕಾಲದ ಕಾಯಿಲೆಯ ತರುವಾಯ ಹುಟ್ಟೂರಿನ ಮಲೆ ಬಾನು ಬಯಲು ಕಾಡುಗಳಲ್ಲಿ ವಿಹರಿಸಿ ಮನಃಸಂತೋಷವನ್ನು ದೇಹಾರೋಗ್ಯವನ್ನೂ ಸಂಪಾದಿಸಿದರು.

ಆ ಸುಂದರ ಮನಸ್ಥಿತಿಯಲ್ಲಿ 'ಹೊಳೆಯರೆಯ ಮೇಲೆ', 'ಚೈತನ್ಯದಲ್ಲಿ ವಸಂತಾಗಮ', 'ಜೀವರಥೋತ್ಸವ', 'ಚೋರರು ಹೃದಯದೊಳಡಗಿಹರು' ಮುಂತಾದ ಕವನಗಳನ್ನು ರಚಿಸಿದರು. ಆ ಅವಧಿಯಲ್ಲಿ ಅವರು ರಚಿಸಿದ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಕನ್ನಡ ಸಾಹಿತ್ಯಕ್ಕೆ ಹಾಗೂ ಕನ್ನಡ ನಾಡಿನ ಮಕ್ಕಳಿಗೆ ದೊರಕಿರುವ ಸಿರಿಯ ಹೊಂಗಾಣಿಕೆ. ಅದು ಬ್ರೌನಿಂಗ್ ಕವಿಯ ಕವಿತೆಯ ಆಧಾರದ ಮೇಲೆ ರಚಿತವಾದುದಲ್ಲ. ಅದರ ಭಾಷಾಂತರವೂ ಅಲ್ಲ. ಅವರು ವೆಸ್ಲಿಯನ್ ಮಿಷನ್ ಹೈಸ್ಕೂಲಿನ ಐದನೆ ಫಾರಂನಲ್ಲಿ ಓದಿದ ಪಠ್ಯ ಪುಸ್ತಕದ ನೆನಪಿನಿಂದ ಹೊಸದಾಗಿ ರೂಪಿತವಾದ ಮಕ್ಕಳ ಅತ್ಯುತ್ತಮ ಕವನ.

ಊರಿನಿಂದ ಹಿಂತಿರುಗಿದ ಕುವೆಂಪು ಅವರು ಶ್ರೀರಾಮಕೃಷ್ಣಾಶ್ರಮದಲ್ಲಿ ಜ್ಞಾನದಾಹಿಯಾಗಿ ಅಧ್ಯಯನದಲ್ಲಿ ತೊಡಗಿದರು. ಬಿ. ಎ. ಮೂರನೇ ವರ್ಷಕ್ಕೆ ತತ್ತ್ವಶಾಸ್ತ್ರ ಮತ್ತು ಮನಃಶಾಸ್ತ್ರಗಳು ಐಚ್ಛಿಕ ವಿಷಯಗಳಾಗಿದ್ದವು.

1929ರಲ್ಲಿ ಶ್ರೀರಾಮಕೃಷ್ಣಾಶ್ರಮವು ಕೃಷ್ಣಮೂರ್ತಿಪುರದಲ್ಲಿ ಬಾಡಿಗೆ ಮನೆಯಲ್ಲಿತ್ತು. ಒಂದು ದಿನ ಆಶ್ರಮಕ್ಕೆ ಅಸಿಸ್ಟೆಂಟ್ ಕಮೀಷನರ್ ಆಗಿದ್ದ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಬಂದರು. ಸ್ವಾಮೀಜಿಯವರು ಕುವೆಂಪು ಅವರನ್ನು ಪರಿಚಯಿಸಿ, ಅವರು ರಚಿಸಿದ ಕವನಗಳ ಬಗ್ಗೆ ಹೊಗಳಿದರು. ಮಾಸ್ತಿಯವರು



ಕೇಳಿಕೊಂಡಂತೆ ಕುವೆಂಪು ಕೆಲವು ಕವನಗಳನ್ನು ಓದಿದರು. ಅವರು ಮೆಚ್ಚಿಕೊಂಡರು. ಅವರು 1930ರಲ್ಲಿ 'ಸತ್ಯ ಶೋಧನಾ ಪುಸ್ತಕ ಭಂಡಾರ' ದಿಂದ ಆ ಕವನಗಳನ್ನು 'ಕೊಳಲು' ಸಂಗ್ರಹವಾಗಿ ಪ್ರಕಟಿಸಿದರು. ಮಾಸ್ತಿಯವರು ಹೀಗೆಯೆ ದ.ರಾ ಬೇಂದ್ರೆಯವರ ಕವನಗಳನ್ನು 'ಗರಿ' ಕವನ ಸಂಕಲನವಾಗಿ 1932ರಲ್ಲಿ ಪ್ರಕಟಿಸಿದರು. ಇಬ್ಬರು ಶ್ರೇಷ್ಠ ಕವಿಗಳ ಮೊದಲ ಕವನ ಸಂಕಲನ ಪ್ರಕಟಿಸಿ ಪ್ರೋತ್ಸಾಹಿಸಿದ್ದು ಮಾಸ್ತಿ ಎಂಬುದು ಕನ್ನಡಿಗರಿಗೊಂದು ಹೆಮ್ಮೆ.

ಶ್ರೀ ರಾಮಕೃಷ್ಣಾಶ್ರಮಕ್ಕೆ ದೇಶ ವಿದೇಶಗಳ ವಿದ್ವಾಂಸರು, ಭಾರತದ ಮತ್ತು ಭಾರತೇತರ ದೇಶಗಳಲ್ಲಿರುವ ಶ್ರೀರಾಮಕೃಷ್ಣ ಮಿಶನ್ನಿಗೆ ಸೇರಿದ ಸ್ವಾಮಿಗಳು ಬಂದು ಉಳಿಯುತ್ತಿದ್ದರು. ಅವರು ಅಧ್ಯಾತ್ಮಿಕತೆಯ ಮತ್ತು ಜ್ಞಾನದ ಔತಣ ಒದಗಿಸುತ್ತಿದ್ದರು. ಅದರಿಂದ ಕುವೆಂಪು ಅವರಿಗೆ ವಿವಿಧ ಪ್ರಕೃತಿಯ ವಿವಿಧ ಮೇಧಾಶಕ್ತಿಯ ಮತ್ತು ವಿವಿಧ ಪ್ರತಿಭೆಯ ಬಹುಜನರ ಸಂಪರ್ಕ ಲಭಿಸಿ ಅವರ ವ್ಯಕ್ತಿತ್ವದ ಶ್ರೀಮಂತತೆಗೆ ಅವಕಾಶ ಒದಗಿತು. ಅದರಿಂದ ಅವರ ಬುದ್ಧಿಗೆ ಪ್ರಖರತೆ, ದೃಷ್ಟಿಗೆ ವೈಶಾಲ್ಯ, ಹೃದಯಕ್ಕೆ ಸ್ಫೂರ್ತಿ ದೊರಕಿತು. ಬಿ. ಎ. ಮೂರನೇ ವರ್ಷದ ಪರೀಕ್ಷೆ ಮುಗಿದ ನಂತರ ಅವರು ಊರಿಗೆ ಹೋದರು.

## ಪ್ರಕೃತಿಯ ಅನುಭಾವ ದೀಪ್ತಿಯಲ್ಲಿ ರೂಪುಗೊಂಡ ಕಾವ್ಯ ಮೀಮಾಂಸಾ ಸೂತ್ರಗಳು

ಕುವೆಂಪು ಅವರು ಕುಪ್ಪಳಿಯಲ್ಲಿದ್ದಾಗ ಪ್ರಾತಃಕಾಲ ಮತ್ತು ಸಂಜೆ ಕವಿಶೈಲ ಮತ್ತು ಸಂಜೆಗಿರಿಗಳಿಗೆ ಸೋದರ ಸೋದರಿಯರೊಡನೆ ಏರಿ, ಸೂರ್ಯೋದಯ ಸೂರ್ಯಾಸ್ತಗಳ ಸವಿ ಸವಿಯುತ್ತಿದ್ದರು. ಸಾರಿಕೆ ಬೇಟೆ, ದೊಡ್ಡ ಬೇಟೆ, ಮರಸು ಬೇಟೆ ಇತ್ಯಾದಿಗಳಲ್ಲಿ ಹಳ್ಳಿಗರೊಡನೆ ಸೇರುತ್ತಿದ್ದರು. ಅವರ ಸಹಜ ಪ್ರಕೃತಿಪ್ರೇಮ ವರ್ಡ್ಸ್‌ವರ್ತ್ ಮೊದಲಾದ ಪಾಶ್ಚಾತ್ಯ ಕವಿವರ್ಯರ ಪರಿಚಯ, ಉಪನಿಷತ್ತಿನ ಋಷಿಗಳು, ರವೀಂದ್ರ ವಿವೇಕಾನಂದರ ಅಧ್ಯಯನದಿಂದ ಸೌಂದರ್ಯಾ-ನುಭೂತಿಯ ಮತ್ತು ಆಧ್ಯಾತ್ಮಿಕ ಪ್ರಜ್ಞೆಯ ದಾರ್ಶನಿಕ ಭೂಮಿಕೆಗೆ ಏರಿತ್ತು.

ಶೃಂಗೇರಿ ಪರಿಸರ ಅವರಲ್ಲಿ ದಿವ್ಯತೆಯ ಅನುಭವವನ್ನುಂಟು ಮಾಡಿತು. ಅದರ ಫಲವಾದ ಕವನ: 'ಶೃಂಗೇರಿ'.

ಅವರಿಗೆ ಕುಪ್ಪಳಿಯಲ್ಲಿ ಒಂದು ಅಪರಾಹ್ನ ನಾಲ್ಕು ಗಂಟೆ ಸಮಯದಲ್ಲಿ ಗುಡುಗು ಸಿಡಿಲು ಮಿಂಚಿನ ಭೀಕರ ಅನುಭವವಾಯಿತು. ಆ ಸಿಡಿಲು ಮನೆಗೆ ಹತ್ತಿಪ್ಪತ್ತು ಮಾರು ದೂರದಲ್ಲಿ ತೋಟಕ್ಕೆ ಹೊಡೆದಿತ್ತು. ಅಡಕೆ ಮರಗಳ ನೆತ್ತಿ ಸುಟ್ಟು, ಬುಡದ ಬಾಳೆ ಮರಗಳು ಸುಟ್ಟು ಹೋಗಿದ್ದವು. ಆ ಭೀಷಣ ಭಯಂಕರತೆಯನ್ನು ಅವರು ಹೀಗೆ ವರ್ಣಿಸಿದ್ದಾರೆ:

'ಕವಿ ಆ ರುದ್ರ ಸೌಂದರ್ಯವನ್ನು ಆಸ್ವಾದಿಸಲು ತನ್ನ ಪ್ರತಿಭೆಯ ರಸಜಿಹ್ವೆಯನ್ನು ಚಾಚುತ್ತಿದ್ದನು; ನರಪ್ರಾಣಿ ಪ್ರಕೃತಿಯ ರೌದ್ರತೆಗೆ ಗದಗದಿಸುತ್ತಿತ್ತು!' ಅವರು ಅದು ಕವಿಯಾದ ತಮ್ಮಲ್ಲಿ ಉಂಟುಮಾಡಿದ ಕಾವ್ಯ ಮೀಮಾಂಸಾ ಸೂಕ್ಷ್ಮಗಳನ್ನು ಹೀಗೆ ವಿಶದ ಪಡಿಸಿದ್ದಾರೆ:

'ಅಂದು ನನಗಾದ ಆ ಅನುಭವ ಮುಂದೆ ನನಗೆ 'ಪ್ರತಿಮಾ ಮತ್ತು ಪ್ರತಿಕೃತಿ' ವಿಧಾನಗಳನ್ನು ಕಂಡುಹಿಡಿದು ಪ್ರತಿಪಾದಿಸುವುದಕ್ಕೆ ತುಂಬಾ ಸಹಾಯವಾಯಿತು; ಮತ್ತು ಭಾಷೆಯ 'ಲೋಕೋಪಯೋಗ' ಮತ್ತು 'ಭಾವೋಪಯೋಗ'ಗಳನ್ನು ಕುರಿತು, ಕಾವ್ಯ ಮೀಮಾಂಸೆಯಲ್ಲಿ ಗುರುತಿಸಲು ಸಾಧ್ಯವಾಯಿತು; ಮತ್ತು ನವೀನ ವಿಮರ್ಶಕರ ಧಿಕ್ಕಾರಕ್ಕೆ ಒಳಗಾಗಿದ್ದ 'ಕವಿಸಮಯ'ಗಳನ್ನು 'ಮೃತ'ವಲ್ಲ ಎಂದು ಸಮರ್ಥಿಸಿ ನನ್ನ ಬರವಣಿಗೆಯಲ್ಲಿ ಪ್ರಯೋಗಿಸಲೂ' (ನೆ.ದೋ. ಪು 738).

ಹೀಗೆ ದಟ್ಟ ಅರಣ್ಯಾನುಭವದಲ್ಲಿ ಮಿಂದ ಕುವೆಂಪು ಚೇತನ ಆ ಪ್ರಕೃತಿಯ ಅನುಭಾವ ದೀಪ್ತಿಯಲ್ಲಿಯೇ ಕಾವ್ಯ ಮೀಮಾಂಸಾ ಸೂತ್ರಗಳನ್ನು ನೀಡಿರುವುದು ಕನ್ನಡಿಗರ ಹೆಮ್ಮೆ. 'ಕವಿ ಸಮಯ'ವೆಂಬುದು ಶ್ರೇಷ್ಠ ಕವಿಗಳ ಜೀವಂತಾನುಭವವೆಂಬ ಅವರ ಮಾತು ಮೌಲಿಕ ಹಾಗೂ ಚಿಂತನಶೀಲ.

* * *



# ಕನ್ನಡ ಎಂ. ಎ. ವಿದ್ಯಾರ್ಥಿ

ಬಿ. ಎ. ಡಿಗ್ರಿ ಪಾಸಾದ ನಂತರ ಕುವೆಂಪು ಅವರು ತತ್ತ್ವಶಾಸ್ತ್ರದ ಎಂ.ಎ. ಸೇರಲು ನಿಶ್ಚಯಿಸಿದ್ದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಆ ವರ್ಷ ಕನ್ನಡ ಎಂ.ಎ ಪ್ರಾರಂಭವಾಯಿತು. ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿಗಳ ಸಲಹೆಯಂತೆ ಅವರು 1927ರಲ್ಲಿ ಕನ್ನಡ ಎಂ. ಎ ಸೇರಿದರು. ಅವರಿಗೆ ಎಂ.ಎ ಅಭ್ಯಾಸ ಮಾಡುವಾಗ ಕನ್ನಡ ಸಾಹಿತ್ಯದ ಸಕ್ರಮ ಅಧ್ಯಯನ ಅವಕಾಶ ಒದಗಿತು. ಅವರಿಗೆ ಆಂಗ್ಲೆಯ ಕಾವ್ಯ ಸಾಹಿತ್ಯದ ಪರಿಚಯದಿಂದ ಅಲ್ಲಿಯ ನಾನಾ ರೀತಿಯ ಛಂದೋ ವಿಧಾನಗಳೆಲ್ಲ ಗ್ರಾಹ್ಯವಾಗಿದ್ದವು. ಅವರು ಸಾನೆಟ್, ಬ್ಲಾಂಕ್‌ವರ್ಸ್‌ನಲ್ಲಿ ಇಂಗ್ಲಿಷ್ ಪದ್ಯಗಳನ್ನು ರಚನೆ ಮಾಡುತ್ತಿದ್ದರು. ಅಂತಹ ಪ್ರಯತ್ನಗಳನ್ನು ಕನ್ನಡ ಪದ್ಯ ರಚನೆಯಲ್ಲಿಯೂ ನಡೆಸಿದ್ದರು.

ಅವರಿಗೆ ಷೇಕ್ಸ್‌ಪಿಯರ್ ನಾಟಕಗಳನ್ನು ಓದಿದಾಗಲೆಲ್ಲ ಕನ್ನಡದಲ್ಲಿಯೂ ಬ್ಲಾಂಕ್‌ವರ್ಸ್ ನಾಟಕ ರಚನೆ ಮಾಡಬೇಕೆಂಬ ಅಭೀಪ್ಸೆ ಕಾಡುತ್ತಿತ್ತು. ಗೋವಿಂದ ಪೈ, ಮಾಸ್ತಿ ವೆಂಕಟೇಶ ಐಯ್ಯಂಗಾರ್ ಮುಂತಾದವರು ಐದು ಮಾತ್ರೆಯ ನಾಲ್ಕು ಗಣಗಳನ್ನುಪಯೋಗಿಸಿ ಆದಿ ಅಂತ್ಯಪ್ರಾಸ ಬಿಟ್ಟು ಅಪ್ರಾಸ ಛಂದಸ್ಸನ್ನು (ಇಂಗ್ಲಿಷ್ ಬ್ಲಾಂಕ್‌ವರ್ಸಿಗೆ ಸಂವಾದಿಯಾಗಿ) ಕಥನಕ ಕವನಕ್ಕೆ ಬಳಸಿದ್ದರು. ಆದರೆ ನಾಟಕಕ್ಕೆ ಅಪ್ರಾಸ ಛಂದಸ್ಸು ಪ್ರಯೋಗಗೊಂಡಿರಲಿಲ್ಲ.[1]

### ‘ಜಲಗಾರ’, ‘ಯಮನಸೋಲು’

ಕುವೆಂಪು ಅವರು 1927ರಲ್ಲಿ ‘ಜಲಗಾರ’, ‘ಯಮನಸೋಲು’ ಮತ್ತು ‘ಮಹಾಶಿವರಾತ್ರಿ’ ಮೂರು ನಾಟಕಗಳನ್ನು ಒಂದಾದ ಮೇಲೆ ಒಂದರಂತೆ ಮೂರು

---

1. ವಿವರಗಳಿಗೆ ನೋಡಿ: ನೆ. ದೋ. ಪು 777 ರಿಂದ 786

ನಾಲ್ಕು ದಿನಗಳಲ್ಲಿ ರಚಿಸಿದರು. 'ಯಮನಸೋಲು' ಮತ್ತು 'ಬಿರುಗಾಳಿ' ಒಟ್ಟಿಗೆ ಎರಡು ನಾಟಕಗಳು ಪ್ರಕಟವಾದವು. 'ಅದಕ್ಕೆ ಮುನ್ನುಡಿ ಬರೆಯುತ್ತ ಪ್ರೊ॥ ವೆಂಕಣ್ಣಯ್ಯನವರು ಮೊತ್ತ ಮೊದಲಾಗಿ ಅಪ್ರಾಸ ಛಂದಸ್ಸಿಗೆ 'ಸರಳರಗಳೆ' ಎಂದು ನಾಮಕರಣ ಮಾಡಿದರು' ಹಾಗೆ ಆ ಸರಳರಗಳೆಯನ್ನು ನಾಟಕಗಳಲ್ಲಿ ಮೊದಲು ಪ್ರಯೋಗಿಸಿದವರು ಕುವೆಂಪು. ಅದನ್ನು ಅವರು ಹೀಗೆ ದಾಖಲಿಸಿದ್ದಾರೆ:

'ಅಂತೂ ಇಂತೂ ಮುಂದೆ ಕೆಲ ವರ್ಷಗಳಲ್ಲಿ ಕಾವ್ಯಕ್ಕೆ ಮಹಾ ಛಂದಸ್ಸಾಗಿಯೂ ನಾಟಕಕ್ಕೆ ನಾಟ್ಯಛಂದಸ್ಸಾಗಿಯೂ ಪರಿವರ್ತಿತವಾಗುವ ವಿಕಾಸದ ಹಾದಿಯಲ್ಲಿ 'ರಗಳೆ' ಅಪ್ರಾಸ ಛಂದಸ್ಸಿನ 'ಸರಳ ರಗಳೆ'ಯಾಗಿ ನನ್ನ ಮೊದಲ ನಾಟಕವಾದ 'ಜಲಗಾರ'ದಲ್ಲಿ ಕಣ್ದೆರೆಯಿತು. (ನೆ.ದೋ. ಪು 782)

'ಜಲಗಾರ' ನಾಟಕ ರಚನೆಯಲ್ಲಿ ರವೀಂದ್ರ ಮತ್ತು ಸ್ವಾಮಿ ವಿವೇಕಾನಂದರ ಕೃತಿಗಳು ಬಿಂದು ರೂಪದಲ್ಲಿಯೂ ಮಹಾತ್ಮಾ ಗಾಂಧೀಜಿಯ ಅಸ್ಪೃಶ್ಯತಾ ನಿವಾರಣಾ ಮತ್ತು ಹರಿಜನ ದೇವಸ್ಥಾನ ಪ್ರವೇಶದ ಚಳವಳಿಗಳ ಪ್ರಭಾವವಿದೆಯೆಂದು ಕುವೆಂಪು ತಿಳಿಸಿದ್ದಾರೆ. ನಾ. ಕಸ್ತೂರಿಯವರು ಮೊತ್ತಮೊದಲಿಗೆ 'ಜಲಗಾರ' ನಾಟಕವನ್ನು ರೋವರ್ ಸ್ಕೌಟುಗಳಿಂದ ಅಭ್ಯಾಸ ಮಾಡಿಸಿ ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಮುಂದೆ ಪ್ರದರ್ಶಿಸಿದರು.

ಅವರ 'ಜಲಗಾರ', 'ಶೂದ್ರತಪಸ್ವಿ' ನಾಟಕಗಳನ್ನು ಕೆಲ ಪೂರ್ವಗ್ರಹ ಪೀಡಿತ ವಿಮರ್ಶಕರು ಬ್ರಾಹ್ಮಣ–ಶೂದ್ರ ಭೇದ ದೃಷ್ಟಿಯಿಂದ ಕಂಡು ಅವುಗಳಲ್ಲಿಯ ಮೌಲ್ಯಗಳನ್ನು ಕಲುಷಿತಗೊಳಿಸಲು ಪ್ರಯತ್ನಿಸಿದರು. ಆದರೆ ಅವುಗಳು 'ಚಿರಕಾಲದ ನಿತ್ಯಸತ್ಯಗಳನ್ನು ಶಾಶ್ವತವಾದ ರಸಾನುಭೂತಿಯನ್ನು ಸಹೃದಯರಿಗೆ ದಾನಮಾಡಿ ಅವರನ್ನು ಜಾತಿ ಕುಲ ಧನ ಕ್ರಿಯಾದಿ ಭೇದವಿಲ್ಲದೆ ರಸಸುಖಿಗಳನ್ನಾಗಿ ಮಾಡುವುದು' (ಕುವೆಂಪು ಸಮಗ್ರ ನಾಟಕ: ಪು. 196) ಎಂದು



ಕುವೆಂಪು ಸ್ಪಷ್ಟವಾಗಿ ತಿಳಿಸಿದರು. ಅವು ಶೋಷಣೆಗೆ ತುಳಿತಕ್ಕೆ ಒಳಗಾದವರನ್ನು ಜಾಗೃತಗೊಳಿಸುತ್ತ ಜನಮನದ ಭಾಗವಾದವು. ಆ ದೃಷ್ಟಿಯಲ್ಲಿ ರಚಿತವಾದ ನಾಟಕಗಳು 'ಬೆರಳ್‌ಗೆ ಕೊರಳ್' 'ಶ್ಮಶಾನ ಕುರುಕ್ಷೇತ್ರಂ' ಮೊದಲಾದವುಗಳು. ಅವರ ಮಕ್ಕಳ ನಾಟಕಗಳು 'ಮೋಡಣ್ಣನ ತಮ್ಮ' 'ನನ್ನ ಗೋಪಾಲ', ಶೇಕ್ಸ್‌ಪಿಯರ್ ಮಹಾಕವಿಯ ಟೆಂಪೆಸ್ಟ್, ಹ್ಯಾಮ್ಲೆಟ್ ಆಧರಿಸಿದ ನಾಟಕಗಳು 'ಬಿರುಗಾಳಿ', 'ರಕ್ತಾಕ್ಷಿ'. ಇನ್ನಿತರ ನಾಟಕಗಳು: 'ಮಹಾರಾತ್ರಿ', 'ವಾಲ್ಮೀಕಿಯ ಭಾಗ್ಯ', 'ಬಲಿದಾನ', 'ಚಂದ್ರಹಾಸ', 'ಕಾನೀನ'.

## ಮೈಲಿ (ದೊಡ್ಡ ಸಿಡುಬು) ಕಾಯಿಲೆ

ಕುವೆಂಪು ಅವರು ಜಗನ್ಮೋಹನ ಅರಮನೆಯಲ್ಲಿ ಜರುಗಿದ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ಬಿ. ಎ. ಡಿಗ್ರಿಯನ್ನು ಪಡೆದರು. ಅನಂತರ ಶಿವಮೊಗ್ಗಕ್ಕೆ ಹೋದರು. ಅಲ್ಲಿ ಅವರಿಗೆ 'ಮೈಲಿ' ಬೇನೆಗೆ ಒಳಗಾಗಿರುವುದು ತಿಳಿಯಿತು. 'ಮೈಲಿ'ಯೆಂದರೆ 'ದೊಡ್ಡಸಿಡುಬು'. ಆ ಜಾಡ್ಯಕ್ಕೆ ಗುಂಡಾ ಪಂಡಿತರು ಗಿಡಮೂಲಿಕೆ ಔಷಧಿ ನೀಡುತ್ತಿದ್ದರು. ಪ್ರತ್ಯೇಕವಾಗಿ ಒಂದು ಗುಡಿಸಲಿನಲ್ಲಿಟ್ಟಿದ್ದರು. ಆಗಲೂ ಅವರು ಸಿದ್ದೇಶ್ವರಾನಂದರು ಕೊಟ್ಟಿದ್ದ ಸ್ವಾಮಿ ವಿವೇಕಾನಂದ, ಶ್ರೀರಾಮಕೃಷ್ಣ, ಶ್ರೀ ಶಾರದಾ ದೇವಿಯವರ ಚಿಕ್ಕಪಟಗಳಿದ್ದ ಚಿತ್ರಕೋಶ ಆಲ್ಬಂ ಅನ್ನು ಭಾವಾವೇಶದಿಂದ ನೋಡುತ್ತಿದ್ದರು. ಆ ಚಿತ್ರಕೋಶವನ್ನು ಕಂಕುಳಲ್ಲಿ ಭದ್ರಪಡಿಸಿಕೊಂಡಿದ್ದರು ಅವರು ಅತಿ ಭ್ರಮಾತ್ಮಕವಾಗಿ ನಡೆದುಕೊಳ್ಳುತ್ತಿದ್ದರು.

ದೊಡ್ಡ ಚಿಕ್ಕಪ್ಪಯ್ಯ ರಾಮಣ್ಣಗೌಡರು ಪುಟ್ಟಪ್ಪನವರಿಗೆ ಮೈಲಿಗೆಯಾಗಿದ್ದು ತಿಳಿದು ತಾವೇ ಬಂದು ಶುಶ್ರೂಷೆ ಮಾಡಿದರು. ಅವರಿಗೆ ತಮ್ಮ ಜನಾಂಗದಲ್ಲಿ ಕುವೆಂಪು ಬಿ. ಎ. ಡಿಗ್ರಿ ಪಾಸುಮಾಡಿ ಎಂ.ಎ. ಅಭ್ಯಾಸ ಮಾಡುತ್ತಿರುವುದು ಹೆಮ್ಮೆಯ ವಿಷಯವಾಗಿತ್ತು. ಇಂತಹ ಮಗನ ಉಳಿವು ಮುಖ್ಯ. ಅವನೇ ಹೋದ ಮೇಲೆ ನಾನಿದ್ದು ಏನು ಪ್ರಯೋಜನ ಎಂಬ ಭಾವದಲ್ಲಿ ಚೆನ್ನಾಗಿ ನೋಡಿಕೊಂಡರು.





ಒಂದೆರಡು ತಿಂಗಳಲ್ಲಿ ಕುವೆಂಪು ಪೂರ್ಣ ಗುಣಮುಖರಾದರು. ಆದರೆ ಅವರ ದೊಡ್ಡ ಚಿಕ್ಕಪ್ಪಯ್ಯನವರಿಗೆ ಮೈಲಿಗೆಯಾಗಿ ಅವರು ಶಿವಮೊಗ್ಗೆಯಲ್ಲಿ ತೀರಿಕೊಂಡರು. ಅನಂತರ ಅವರ ಕಿರಿಯ ತಂಗಿ ಪುಟ್ಟಮ್ಮ ತೀರಿಕೊಂಡಳು.

1928 ಜನವರಿ ತುದಿಗೆ ಪ್ರೊ॥ ವೆಂಕಣ್ಣಯ್ಯನವರ, ಸ್ವಾಮೀಜಿಯವರ ಪತ್ರದಂತೆ ಕುವೆಂಪು ಓದು ಮುಂದುವರಿಸಲು ಮೈಸೂರಿಗೆ ಹೋದರು. ಆಶ್ರಮದಲ್ಲಿದ್ದರು. ಆ ಅವಧಿಯಲ್ಲಿ ಜಗನ್ಮಾತೆ ಕುರಿತು 'ತಾಯಿ', 'ನಾನರಿಯಲಾರೆ' ಕವನಗಳನ್ನು ರಚಿಸಿದರು. ಆಗ ಎಂ. ಎ. ಮೊದಲ ವರ್ಷಕ್ಕೆ ಪರೀಕ್ಷೆ ಇರಲಿಲ್ಲ. ಮಾರ್ಚಿ ತುದಿಗೆ ಬೇಸಗೆ ರಜಕ್ಕೆ ಊರಿಗೆ ಹೋದರು.

1928–29 ಅವರ ಬದುಕಿನಲ್ಲಿ ಗಮನಾರ್ಹ ಘಟ್ಟವಾಗಿದೆ. ಆಗ ಅವರು ಹಲವಾರು ಭಾವಗೀತೆಗಳು, ಸಣ್ಣಕತೆಗಳು, ದೀರ್ಘ ಕವನಗಳು, ನಾಟಕಗಳು, ನಾನಾ ಪ್ರಕಾರದ ಸಾಹಿತ್ಯಕೃತಿಗಳನ್ನು ರಚಿಸಿದರು. ಅವರು 'ಆಶ್ರಮದ ಆಧ್ಯಾತ್ಮಿಕ ಜೀವನಕ್ಕೆ ವಿಶ್ವವಿದ್ಯಾನಿಲಯದ ಸಾಹಿತ್ಯ ಜೀವನವು ನೂತನೋಜ್ವಲ ಕಾಂತಿಯಿತ್ತು ನನ್ನ ಹೃದಯ ಹುರಿದುಂಬಿತು. ಪೂಜ್ಯ ಸ್ವಾಮಿ ಸಿದ್ಧೇಶ್ವರಾನಂದರಂತಹ ತ್ಯಾಗೀಶ್ವರರ ಸಾನ್ನಿಧ್ಯಕ್ಕೆ ಪೂಜ್ಯ ವೆಂಕಣ್ಣಯ್ಯನವರಂತಹ ಪ್ರಾಧ್ಯಾಪಕವರೇಣ್ಯರ ಸ್ನೇಹಮಯ ಸಹವಾಸ ದೊರೆತು ನನ್ನ ಚೇತನಕ್ಕೆ ಮೋಡದ ನಾಡಿನಲ್ಲಿ ಮಳೆಬಿಲ್ಲಗರಿ ಮೂಡಿತು!'[2] ಎಂದು ಸಂತಸ ವ್ಯಕ್ತಪಡಿಸಿದ್ದಾರೆ.

ವಿದ್ಯಾರ್ಥಿಯಾಗಿದ್ದಾಗ ಅವರು ಬಟ್ಟೆಯ ಷೋಕಿಗಾಗಿ ದುಡ್ಡು ಖರ್ಚು ಮಾಡುತ್ತಿರಲಿಲ್ಲ. ಖಾದಿಯ ಅಂಗಿ, ಖಾದಿಯ ಪಂಚೆ, ಖಾದಿಯ ಟೋಪಿ, ಸಾಧಾರಣ ಬೆಲೆಯ ಮೆಟ್ಟು–ಇಷ್ಟು ಅವರ ವ್ಯಯದ ವ್ಯಾಪ್ತಿಯಾಗಿತ್ತು. ವಿದ್ಯಾರ್ಥಿ ವೇತನದ ದುಡ್ಡು ಏನಾದರೂ ಮಿಗುವ ಪಕ್ಷದಲ್ಲಿ ಅದನ್ನು ಪುಸ್ತಕ ಕೊಳ್ಳಲು ಮಾತ್ರ ವಿನಿಯೋಗ ಮಾಡುತ್ತಿದ್ದರು.

---

2. ನೆ.ದೋ. ಪು 829



## ರಜತೋತ್ಸವ ಪದಕ

ಶ್ರೀಮನ್ ಕೃಷ್ಣರಾಜ ಒಡೆಯರ ರಜತೋತ್ಸವದ ಕವನ ರಚನಾ ಸ್ಪರ್ಧೆಗೆ ಕುವೆಂಪು 'ಕುಮುದಿನಿ' ಕಥನ ಕವನ ಕಳುಹಿಸಿದ್ದರು. ಅದು ವರ್ಡ್ಸ್‌ವರ್ತ್ ಕವಿಯ ಕಥನಕವನ Laodamia ದ ಆಧಾರದ ಮೇಲೆ ಬರೆದದ್ದು. ಅದು ಭಾಷಾಂತರವಲ್ಲ. ಅದರ ಗಣವಿನ್ಯಾಸ ಭಾಮಿನಿಯದಾದ್ದರೂ ಅದು ಷಟ್ಪದಿಯಲ್ಲ, ಬಹುಪದಿ. ಆ ಕವನಕ್ಕೆ ಸ್ಪರ್ಧೆಯ ಮೊದಲ ವರ್ಷವೆ ರಜತೋತ್ಸವ ಪದಕ ದೊರೆಯಿತು. ಅದನ್ನು 1928ರ ಘಟಿಕೋತ್ಸವದಲ್ಲಿ ನೀಡಿದರು.

ಅದಕ್ಕೂ ಮೊದಲು ಅವರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಕವಿಸಮ್ಮೇಳನದ ಅಧ್ಯಕ್ಷತೆ ವಹಿಸಿ ಜನಮನಕ್ಕೆ ಗೋಚರವಾಗಿದ್ದರು. ಆಗ ಅವರು 'ಕಿಂದರಿಜೋಗಿ'ಯನ್ನು ಲಾವಣಿಯಂತೆ ಹಾಡಿದರು. ಎಸ್.ಜಿ. ಶಾಸ್ತ್ರಿಗಳು ಗಾಂಭೀರ್ಯವನ್ನೆಲ್ಲ ಗಾಳಿಗೆ ತೂರಿ ಬಿದ್ದು ಬಿದ್ದು ನಕ್ಕರು! ಅದೇ ವರ್ಷ ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದವರು ಏರ್ಪಡಿಸಿದ್ದ ಸಣ್ಣ ಕತೆಗಳ ಸ್ಪರ್ಧೆಯಲ್ಲಿ ಕುವೆಂಪು ಅವರ 'ಯಾರೂ ಅರಿಯದ ವೀರ'ಕ್ಕೆ ಮುದ್ದಣ ಸ್ವರ್ಣ ಪದಕ ಬಹುಮಾನ ದೊರಕಿತು.

ಆ ವರ್ಷ ಅವರ 'ಯಮನ ಸೋಲು' ನಾಟಕವನ್ನು ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳೂ ಅಧ್ಯಾಪಕರೂ ಸೇರಿ ವಾರ್ಷಿಕೋತ್ಸವದಲ್ಲಿ ಅಭಿನಯಿಸಿದರು. ಆ ನಾಟಕಕ್ಕೆ ಗಣ್ಯರಾದ ಪ್ರಿನ್ಸಿಪಾಲ್ ರಾಲೊ, ವೈಸ್ ಛಾನ್ಸಲರ್ ಎನ್. ಎಸ್. ಸುಬ್ಬರಾಯ, ಅಸಿಸ್ಟೆಂಟ್ ಕಮೀಷನರ್ ಮಾಸ್ತಿ ಆಗಮಿಸಿದ್ದರು. ಆ ನಾಟಕ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಗಿ ಸಾಹಿತ್ಯಲೋಕವನ್ನು ಚಕಿತಗೊಳಿಸಿತ್ತು.

'ಕಿರಿಯ ಕಾಣಿಕೆ' ಪ್ರಕಟಣೆಯಲ್ಲಿ ಅವರ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಮತ್ತು ಇತರ ಆರು ಕವನಗಳು ಪ್ರಕಟವಾದವು! 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಕರ್ನಾಟಕವನ್ನೆಲ್ಲ ಬೆರಗುಗೊಳಿಸಿತು! ಪಂಜೆ ಮಂಗೇಶರಾಯರು ಅವರ ಬಾಲ್ಯ ಸಾಹಿತ್ಯ ಮಾಲೆಯಲ್ಲಿ ಅದನ್ನು ಸಾವಿರಗಟ್ಟಲೆ ಅಚ್ಚು ಮಾಡಿಸಿದರು!

ಅವರು 'ಕನ್ನಡ ಸಾಹಿತ್ಯದ ಮೇಲೆ ಇಂಗ್ಲಿಷ್ ಸಾಹಿತ್ಯದ ನವೀನ ಪ್ರಭಾವ' ಎಂಬ ಪ್ರಬಂಧ ರಚಿಸಿದ್ದರು. ಅದು ತಿ. ತಾ. ಶರ್ಮ ಅವರ 'ವಿಶ್ವಕರ್ನಾಟಕ' ಪತ್ರಿಕೆಯ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಅವರು ಬರೆದ ಇನ್ನೊಂದು ಪ್ರಬಂಧ 'ಸೀತಾವನವಾಸ' ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತು.

ಕುವೆಂಪು ಅವರ ಕನ್ನಡ ಎಂ. ಎ. ಸಹಪಾಠಿ ಡಿ. ಎಲ್. ನರಸಿಂಹಾಚಾರ್. ಅವರು ಭಾಷಾಶಾಸ್ತ್ರ ವ್ಯಾಕರಣಗಳಲ್ಲಿ ಸಮರ್ಥರು. ಅವರು ಕುವೆಂಪುವಿಗೆ 'ಶಬ್ದಮಣಿ ದರ್ಪಣ' ಅಧ್ಯಯನಕ್ಕೆ ನೆರವಾದರು.

ಆ ಸಂದರ್ಭದಲ್ಲಿ ಕುವೆಂಪು ರಚಿಸಿ ಪ್ರಸಿದ್ಧವಾಗಿರುವ ಒಂದು ಸೂತ್ರ ಪ್ರಾಯದ ಸೂಕ್ತಿ.

ಕವಿಗೆ ಕರ್ಣಂ ಪ್ರಮಾಣಂ
ವ್ಯಾಕರಣಮಲ್ತು;
ವ್ಯಾಕರಣಮೇಕೆಂಬೆಯೇಂ?
ಮರೆವುದಕೆ ಕಲ್ತು!

1928–29ರಲ್ಲಿ ಆಶ್ರಮದಲ್ಲಿದ್ದಾಗ 'ಸ್ವಾಮಿ ವಿವೇಕಾನಂದ' ಕೃತಿ ರಚಿಸಿದರು. ಅನಂತರ ಅವರು ಷೇಕ್ಸ್‌ಪಿಯರ್‌ನ 'ಟೆಂಪೆಸ್ಟ್' ನಾಟಕವನ್ನು 'ಬಿರುಗಾಳಿ'ಯಾಗಿ ಅನುವಾದಿಸಿದರು. ಅದಿನ್ನೂ ಹಸ್ತಪ್ರತಿಯಲ್ಲಿದ್ದಾಗಲೆ ಆ ವರ್ಷವೆ ಮಹಾರಾಜಾ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಆಡಿದರು. ಅದನ್ನು ಬಿ.ಎಂ.ಶ್ರೀ ಶ್ಲಾಘಿಸಿದರು. ಅವರು ಬರೆದ ಸ್ವತಂತ್ರನಾಟಕ 'ಶ್ಮಶಾನ ಕುರುಕ್ಷೇತ್ರಂ'. ಅದನ್ನು ರಚಿಸುವಾಗ ಅವರು 'ಅಲೌಕಿಕ ಸಾನ್ನಿಧ್ಯಾನುಭವದ ಅಮಲು ನನ್ನ ಚೇತನವನ್ನೆಲ್ಲ ಆಕ್ರಮಿಸಿದಂತಿತ್ತು.' ಎಂದು ತಿಳಿಸಿದ್ದಾರೆ.



## ಕುಟುಂಬ ಜವಾಬ್ದಾರಿಯ ನಿರ್ವಹಣೆ

1929ರ ಜನವರಿಯಲ್ಲಿ ಮನೆಯ ವಹಿವಾಟು ನಡೆಸುತ್ತಿದ್ದ ತಮ್ಮ ತಿಮ್ಮಯ್ಯ ತೀರಿಹೋದ. ಆಗ ಆತನ ಚಿಕ್ಕವಯಸ್ಸಿನ ಹೆಂಡತಿ ಕೆಲವೇ ತಿಂಗಳ ಗರ್ಭಿಣಿಯಾಗಿದ್ದಳು. ಶೋಕಾಗ್ನಿಯಲ್ಲಿ ಬೆಂದ ಅವಳು ಹೆತ್ತ ಕೂಸು ಬದುಕಲಿಲ್ಲ. ಅದೇ ಸಮಯದಲ್ಲಿ ಹಿರಿಯ ತಂಗಿ ದಾನಮ್ಮ ಹೆತ್ತ ಶಿಶುವಿನೊಡನೆ ತೀರಿಹೋದಳು. ಕುವೆಂಪು ಮನೆಯ ಯಜಮಾನಿಕೆಯನ್ನು ತಿಮ್ಮಯ್ಯನ ತಮ್ಮ ವೆಂಕಟಯ್ಯನಿಗೆ ವಹಿಸಿದರು. ದೊಡ್ಡ ಚಿಕ್ಕಪ್ಪ ರಾಮಣ್ಣಗೌಡರು ಮಾಡಿದ್ದ ಸಾಲ ತೀರಿಸಲು ಹಲವು ಜಮೀನು, ಗದ್ದೆ, ಅಡಕೆ ತೋಟವನ್ನು ಸಾಲಕೊಟ್ಟವರಿಗೆ ಬರೆದು ಕೊಟ್ಟರು. ಆಸ್ತಿ ಎಲ್ಲ ಹೋಗಿ ಮನೆಯ ಮುಂದಿನ ಅಡಿಕೆ ತೋಟ ಮತ್ತು ಮನೆಯ ಬಳಿಯಲ್ಲೆ ಇದ್ದ ಗದ್ದೆಗಳು ಮಾತ್ರ ಉಳಿದವು.

## ಹಂಪೆಯ ಯಾತ್ರೆ: ಬೇಸಿಗೆ ಕುಪ್ಪಳಿ ನಂದನವನದಲ್ಲಿ

ಆಗ ಎಂ.ಎ ಡಿಗ್ರಿಯ ಅಂಗವಾಗಿ ಒಂದು ಸಂಸ್ಕೃತಿ ಪ್ರವಾಸ ಹೋಗಬೇಕಾಗಿತ್ತು. ಹಾಗಾಗಿ ಅವರು ಹೊರಟಿದ್ದು ಹಂಪೆಗೆ. ಅವರ ಮಾರ್ಗದರ್ಶಿ ಮುಖಂಡರು ಶ್ರೀನಿವಾಸಚಾರ್ಲು (ಶ್ರೀ ಅನಂತಕೃಷ್ಣಶರ್ಮರ ತಮ್ಮ). ಪ್ರವಾಸ ಹೊರಟ ಸ್ನೇಹಿತರು: ಡಿ. ಎಲ್. ನರಸಿಂಹಾಚಾರ್ಯ, ಕೆ. ವೆಂಕಟರಾಮಪ್ಪ, ಬಿ. ಎಸ್. ವೆಂಕಟರಾಮಯ್ಯ, ಎನ್. ಅನಂತರಂಗಾಚಾರ್, ನಂಜುಂಡಯ್ಯ, ಭೀಮಸೇನರಾವ್ ಮತ್ತು ಇತರರು. ಕವಿಚೇತನಕ್ಕೆ ಆ ಪ್ರವಾಸ ಅಷ್ಟೇನೂ ಆಕರ್ಷಣೀಯವಾಗಿರಲಿಲ್ಲ. ಹಂಪೆಯನ್ನು ನೋಡಿ ಅವರು ರಚಿಸಿದ ಕವನಗಳು: ‘ಹಂಪೆಯ ಭೀಮ’, ‘ಹಂಪೆ’.

ಪ್ರವಾಸ ಮುಗಿಸಿ ಕುಪ್ಪಳಿ ಊರಿಗೆ ಮರಳಿದಾಗ, ಅವರಿಗೆ ಮರುಭೂಮಿಯ ಪರ್ಯಟನದಿಂದ ನಂದನವನಕ್ಕೆ ಬಂದಂತಾಯಿತು ಎಂದು ಆತ್ಮಕಥೆಯಲ್ಲಿ ಬರೆದಿದ್ದಾರೆ. ಆ ಬೇಸಗೆಯ ಎರಡು ತಿಂಗಳಲ್ಲಿ 24 ಕವನಗಳನ್ನು ರಚಿಸಿದರು.

ಅವುಗಳಲ್ಲಿ ಈ ಕೆಲವು ಕವನಗಳು ನವೋದಯ ಸಾಹಿತ್ಯದಲ್ಲಿ ಐತಿಹಾಸಿಕ ಸ್ಥಾನ ಗಳಿಸಿವೆ: 'ಮುಂಗಾರು', 'ಮಲೆನಾಡಿಗೆ ಬಾ', 'ಕಾಜಾಣ', 'ಸಹ್ಯಾದ್ರಿ ಶೃಂಗದಲಿ', 'ಅರುಣ ಗೀತೆ'

ಅವರ ಕೆಲವು ಕವನಗಳನ್ನು ಅವರೇ ತಿಳಿಸಿರುವಂತೆ 'ಭಾವಯಿತ್ರಿ ಪ್ರತಿಭೆಯಿಂದ ಕಲ್ಪಿಸಿಕೊಂಡು ಕವನಗಳ ರಸಾಸ್ವಾದನೆ ಮಾಡಬೇಕಾಗುತ್ತದೆ'. ಉದಾ: ಧಾರೆಯ ದಾರದಿ ನೆಯ್ದಿಹ ತೆಳ್ಳನೆ ಜವನಿಕೆಯುಡುವಳು ತಿರೆವೆಣ್ಣು! (ಮುಂಗಾರು).

ಕೆಲ ವಿಮರ್ಶಕರು ಪೂರ್ವಗ್ರಹ ಪೀಡಿತರಾಗಿ 'ಕಾಜಾಣ' ಕವನವನ್ನು, 'ಜಲಗಾರ', 'ಶೂದ್ರತಪಸ್ವಿ' ನಾಟಕಗಳನ್ನು ವಿಮರ್ಶಿಸಿದರು. ಅದನ್ನು ಕಂಡ ಕುವೆಂಪು 'ಬ್ರಾಹ್ಮಣ-ಶೂದ್ರ ಭೇದ ದೃಷ್ಟಿಯಿಂದ ವ್ಯಾಖ್ಯಾನ ಮಾಡಿ ಸಾಹಿತ್ಯ ಮೌಲ್ಯವನ್ನೆ ಕಲುಷಿತಗೊಳಿಸಿರುವುದು ವಿಷಾದದ ವಿಷಯವಾಗಿದೆ' ಎಂದು ನೊಂದು ನುಡಿದಿದ್ದಾರೆ.[3]

---

3.ನೆ.ದೋ. ಪು 855



# ಕನ್ನಡ ಲೆಕ್ಚರರ್

ಕುವೆಂಪು ಅವರು 1929ರಲ್ಲಿ ಎಂ.ಎ ಯಲ್ಲಿ ತೇರ್ಗಡೆಯಾದರು. ಸ್ವಾಮಿ ಸಿದ್ದೇಶ್ವರಾನಂದರ ಸೂಚನೆಯಂತೆ ಅದೇ ವರ್ಷ ವಿಶ್ವವಿದ್ಯಾಲಯದ ಕನ್ನಡ ಲೆಕ್ಚರರ್ ಕೆಲಸಕ್ಕೆ ಅರ್ಜಿ ಹಾಕಿದರು. ಬಿ. ಎಂ. ಶ್ರೀ. ರಿಜಿಸ್ಟ್ರಾರ್ ಆಗಿದ್ದರು. ಅವರು ಕನ್ನಡ ಲೆಕ್ಚರರ್ ಆಗಿ ಅಪಾಯಿಂಟ್ ಮಾಡಿದರು. 1929ರ ಮಧ್ಯಭಾಗದಲ್ಲಿ ಕನ್ನಡದವರನ್ನು 'ಪಂಡಿತ' ನಾಮಕ ಪಟ್ಟಿಯಲ್ಲಿ ತಿಂಗಳಿಗೆ 75 ರೂ. ಮೇಲೆಯೆ ನೇಮಿಸುತ್ತಿದ್ದುದು ರೂಢಿ. ಆದರೆ ಕುವೆಂಪು ಅವರನ್ನು 'ಲೆಕ್ಚರರ್' ಎಂದು ಕರೆದು 100 ರೂಪಾಯಿಯ ಮೇಲೆ ನೇಮಿಸಿದ್ದರು.

ಆ ಕುರಿತು ನಡೆದ ಘಟನೆಯನ್ನು ಕುವೆಂಪು ಹೀಗೆ ದಾಖಲಿಸಿದ್ದಾರೆ: 'ನನ್ನ ನೇಮಕದ ಆರ್ಡರನ್ನು ನನಗೆ ಕಳಿಸುವ ಮುನ್ನ ಆಫೀಸಿನ ಮುಖ್ಯ ಕರಣಿಕನು – Superintendent–ಆತನ ಜಾತಿ ಬ್ರಾಹ್ಮಣ–ರಿಜಿಸ್ಟ್ರಾರ್ ಬಳಿಗೆ ನೇಮಕಾಜ್ಞೆಯನ್ನು ತೆಗೆದುಕೊಂಡು ಹೋಗಿ, ನಿಯಮ ಭಂಗವಾದದ್ದನ್ನು ತೋರಿಸಿ "ಸಾರ್ ರೂಲ್ಸಿನ ಪ್ರಕಾರ ಎಲ್ಲರನ್ನೂ ತಿಂಗಳಿಗೆ 75 ರೂನಂತೆ ನೇಮಕ ಮಾಡಬೇಕು. ಇವರಿಗೆ 100 ರೂಪಾಯಿ ಮಾಡಿಬಿಟ್ಟಿದ್ದೀರಿ. ಆಮೇಲೆ 'ಅಬ್ಜೆಕ್ಷನ್' ಬರುತ್ತೆ" ... ಎಂದೆಲ್ಲ ತನ್ನ ಕರ್ತವ್ಯ ಪ್ರಜ್ಞೆ ಪ್ರದರ್ಶನ ಮಾಡಿದನಂತೆ. ಅದಕ್ಕೆ ಅವರು ಮುಗುಳು ನಗುತ್ತಾ ಹೇಳಿದರಂತೆ "ಮಿಸ್ಟರ್...ಯ್ಯ, ಎಲ್ಲಿ ಸಿಗುತಾರ್ರಿ ನಿಮಗೆ ಅವರಂಥವರು, ಸಾವಿರ ರೂಪಾಯಿ ಕೊಟ್ಟರೂ?... ಇವೊತ್ತೇ ಆರ್ಡರ್ ಕಳಿಸಿಬಿಡಿ, ಆಶ್ರಮಕ್ಕೆ."[1]

---

1. ನೆ. ದೋ. ಪು 860





ಕುವೆಂಪು ಅವರು ಲೆಕ್ಚರರ್ ಆಗಿ ಕೋಟು ಪಂಚೆ ಪೇಟ ಮತ್ತು ಕೊರಳ ಸುತ್ತ ಉತ್ತರೀಯ ಧರಿಸಿ ಜಬರ್ದಾಗಿ ಕಾಣುತ್ತಿದ್ದರು. ವಿದ್ಯಾರ್ಥಿಗಳು ಅವರ ತರಗತಿಗಳಲ್ಲಿ ನಿಃಶ್ಯಬ್ದರಾಗಿ ಕುಳಿತು ಕುತೂಹಲದಿಂದ ಪಾಠ ಪ್ರವಚನವನ್ನು ಆಲಿಸಿ ಆಸ್ವಾದಿಸುತ್ತಿದ್ದರು. ಅವರೊಬ್ಬ ಆದರ್ಶ ಅಧ್ಯಾಪಕರಾಗಿದ್ದರು. ಅವರ ಅಧ್ಯಾಪನ ರೀತಿ ಕುರಿತು ಅವರ ವಿದ್ಯಾರ್ಥಿ ಪ್ರಭುಶಂಕರ ಹೀಗೆ ಹೇಳಿದ್ದಾರೆ.

'ಅವರ ಅಧ್ಯಾಪನದಲ್ಲಿ ವಾಗ್ಮಿತೆ ಇರುತ್ತಿರಲಿಲ್ಲ; ಅದರ ಬದಲು ಹೇಳುವ ವಿಷಯದೊಂದಿಗೆ ತಲ್ಲೀನತೆಯನ್ನು ಸಾಧಿಸಿ, ಝಗ್ಗನೆ ಹೊಸ ಹೊಸ ಅರ್ಥಗಳನ್ನು ತೆರೆಯುವ ಮೋಡಿ ಇರುತ್ತಿತ್ತು. ಕಾವ್ಯ ಮೀಮಾಂಸೆಯನ್ನು ಪಾಠ ಹೇಳಲಿ, ಕಾವ್ಯವನ್ನು ಪಾಠ ಹೇಳಲಿ, ಅದೊಂದು ರೀತಿಯಲ್ಲಿ ಮಿಂಚಿನ ಗೆರೆಗಳನ್ನು ಕೊರೆಯುವ ಸೃಜನ ಕ್ರಿಯೆಯಾಗುತ್ತಿತ್ತು. ಅವರು ಅನೇಕ ವಿಷಯಗಳನ್ನು ಕುರಿತು ತರಗತಿಗಳಲ್ಲಿ ಮಾಡಿದ ವ್ಯಾಖ್ಯಾನಗಳೂ ಅಲ್ಲಿ ಸ್ಫುರಿಸಿದ ಹೊಳಹುಗಳೂ, ಅವರ ಹಲವಾರು ವಿಮರ್ಶಾ ಲೇಖನಗಳಲ್ಲಿ ದಾಖಲಾಗಿದೆ.'[2]

ಆ ವರ್ಷದಲ್ಲಿ ನಾಟಕ, ಚಿತ್ರಕಥೆ, ಜೀವನ ಚರಿತ್ರೆಗಳನ್ನು ರಚಿಸುತ್ತ ಹಲವಾರು ಕವನಗಳನ್ನು ಬರೆದಿದ್ದರು. ಅವುಗಳಲ್ಲಿ ದೀರ್ಘ ಕವನಗಳು 'ಲಲಿತಾದ್ರಿ', 'ಪಾಂಚಜನ್ಯ'. ಅವರ ಕವನಗಳಲ್ಲಿ ದೋಷವನ್ನು ಹುಡುಕಿ ಸೌಂದರ್ಯದ ಸ್ವಾರಸ್ಯಕ್ಕೆ ಹೊರಗಾಗುತ್ತಿದ್ದ ವಿಮರ್ಶಕರನ್ನು ಕುರಿತು ಹೀಗೆ ನೊಂದು ನುಡಿದಿದ್ದಾರೆ: 'ಕೆಲವು ಅಸೂಯಾಪರರಾದವರು ವಿಮರ್ಶಕ ವೇಷವನ್ನು ತೊಟ್ಟ ಜಿಗಣೆಗಳಾಗಿದ್ದರು. ಅವರು ಬಣ್ಪಿಡಿದ ಕೆಚ್ಚಲಿನ ಹಾಲನ್ನು ಹೀರುವ ಕರುವಿನಂತಲ್ಲದೆ ಕೆಚ್ಚಲಿನ ಮಾಂಸಕ್ಕೆ ಕಚ್ಚಿ ಗಂಟು ಬಿದ್ದು ರಕ್ತ ಹೀರುವ ಕೆಲಸದಲ್ಲಿ ತೃಪ್ತರಾಗುತ್ತಿದ್ದರು.'[3]

---

2. ಪ್ರಭುಶಂಕರ, ಕುವೆಂಪು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1995, ಪು. 63.
3. ನೆ.ದೋ. ಪು 865



## ಶ್ರೀಮತ್ ಸ್ವಾಮಿ ಶಿವಾನಂದಜಿ ಅವರಿಂದ ಮಂತ್ರದೀಕ್ಷೆ

ಸ್ವಾಮಿ ಸಿದ್ದೇಶ್ವರಾನಂದರ ಮಾತಿನಂತೆ ದೀಕ್ಷೆ ತೆಗೆದುಕೊಳ್ಳಲು ಅವರೊಡನೆ ಕುವೆಂಪು ಮತ್ತು ದೇವಂಗಿ ಮಾನಪ್ಪ–ಶ್ರೀರಾಮಕೃಷ್ಣ ಮಹಾಸಂಘದ ಮೂಲ ಕೇಂದ್ರವಿರುವ ಬೇಲೂರು ಮಠಕ್ಕೆ ಹೋದರು. ಮೈಸೂರಿನಿಂದ ರೈಲಿನಲ್ಲಿ ಪ್ರಯಾಣ ಮಾಡಿ ಮದ್ರಾಸ್ ತಲುಪಿದರು. ಅಲ್ಲಿ ಮೈಲಾಪುರದಲ್ಲಿರುವ ಶ್ರೀ ರಾಮಕೃಷ್ಣಾಶ್ರಮದಲ್ಲಿ ತಂಗಿದರು. ಅವರು ಮದ್ರಾಸಿನಲ್ಲಿ ಮೊದಲ ಬಾರಿಗೆ ಕಡಲನ್ನು ಕಂಡರು. ಅಡ್ಯಾರ್‌ನಲ್ಲಿ ವಟವೃಕ್ಷ, ಥಿಯೋಸಫಿಕಲ್ ಸೊಸೈಟಿ, ಅದರ ಲೈಬ್ರರಿ ನೋಡಿದರು. ಶ್ರೀರಾಮಕೃಷ್ಣ ವಿದ್ಯಾರ್ಥಿನಿಲಯ ನೋಡಿದರು.

ಮದ್ರಾಸಿನಿಂದ ಕಲ್ಕತ್ತಗೆ ರೈಲಿನಲ್ಲಿ ಪ್ರಯಾಣ ಮಾಡಿ ಹೌರಾ ಸ್ಟೇಷನ್ ತಲುಪಿದರು. ಅಲ್ಲಿಂದ ಬೇಲೂರು ಮಠಕ್ಕೆ ಹೋದರು. ಅಲ್ಲಿ ಶರ್ವಾನಂದ, ಅನಂತಾನಂದ, ಮಹಾಪುರುಷಜಿ (ಸ್ವಾಮಿ ಶಿವಾನಂದ) ಅವರ ದರ್ಶನವಾಯಿತು. ಅವರು ವಿವೇಕಾನಂದರ ಕೊಠಡಿ ನೋಡಿದರು. ಗಂಗಾಮಾತೆಯ ದರ್ಶನವಾಯಿತು.

ತರ್ಕಶಾಸ್ತ್ರ ಅಧ್ಯಾತ್ಮ ಶಾಸ್ತ್ರ ಓದಿದ ಕುವೆಂಪು ಅವರಲ್ಲಿ ತತ್ತ್ವ ಜ್ಞಾನಿಗೆ ಇರಬೇಕಾದ ಮನೋಸೂಕ್ಷ್ಮತೆಯೂ ಕವಿಗೆ ಇರಬೇಕಾದ ಯೌಗಿಕ ದೃಷ್ಟಿಯೂ ಇದ್ದವು. ಅವರು ತಾ 8–10–1929 ರಂದು ಶ್ರೀಮತ್ ಸ್ವಾಮಿ ಶಿವಾನಂದಜಿ ಅವರಿಂದ ದೀಕ್ಷೆ ಪಡೆದರು.

ಬೇಲೂರು ಮಠದ ಸ್ನಾನಘಟ್ಟದಿಂದ ಶ್ರೀರಾಮಕೃಷ್ಣರಿಂದ ಪಾವನವಾದ ಸ್ಥಳ ದಕ್ಷಿಣೇಶ್ವರಕ್ಕೆ ಸುಮಾರು ಎರಡೂವರೆ ಮೈಲಿ. ಅಲ್ಲಿಗೆ ಹೋಗಿ ಆತ್ಮ ಜ್ಯೋತಿಯ ಅನುಭವ ಪಡೆದರು. ಭಗವಾನ್ ಮಹಾಮಾತೆ ಕಾಳಿದೇವಿಯ ದರ್ಶನ ಮಾಡಿದರು. ಗುರುದೇವರನ್ನು 14 ವರ್ಷ ಸೇವೆ ಮಾಡಿದ ಶ್ರೀ ರಾಮಲಾಲದಾದಾರನ್ನು ನೋಡಿದರು. ಮಹಾಮಾತೆ ಶ್ರೀ ಶಾರದಾದೇವಿ ವಾಸಿಸುತ್ತಿದ್ದ ಮಂದಿರ (ನಹಬತ್ ಖಾನೆ) ನೋಡಿದರು.

ಪರಮಹಂಸರು ತಾಂತ್ರಿಕ ಸಾಧನೆ ಮಾಡಿದ ಬಿಲ್ವ ವೃಕ್ಷದ ಬಳಿಗೆ ಹೋದರು. ತೋತಾಪುರಿ ಧುನಿಯ ಬಳಿಯಲ್ಲಿ ಕುಳಿತಿದ್ದಾಗ ಕಂಡ ಬ್ರಹ್ಮದೈತ್ಯನ ಮರವನ್ನು ನೋಡಿದರು. ಮಥುರಾ ಬಾಬುವಿನ ಅರಮನೆಯಲ್ಲಿ ಸಾಧನೆ ಮಾಡಿದ ಸ್ಥಳ, ಇಸ್ಲಾಂ ಸಾಧನೆ ಮಾಡಿದ ಸ್ಥಳ, ಶಿವದೇವಾಲಯಗಳನ್ನು ದರ್ಶಿಸಿದರು.

ನವಯುಗಾವತಾರರ ಲೀಲೆಯನ್ನು ಜಗತ್ತಿಗೆ ಮೊದಲು ತಿಳಿಸಿದ 'ಶ್ರೀರಾಮಕೃಷ್ಣ ಕಥಾಮೃತ'ದ ಗ್ರಂಥಕರ್ತರಾದ ಮಾಸ್ಟರ್ ಮಹಾಶಯರ ಮನೆಗೆ ಹೋಗಿ ಅವರನ್ನು ಕಂಡು ಸಂಭಾಷಿಸಿದರು. ಅವರ ಮುಂದೆ ಕುವೆಂಪು ಅವರು ತಾವು ಬರೆದ 'ಶ್ರೀರಾಮಕೃಷ್ಣ ಪರಮಹಂಸ' ಕವನ ಹಾಡಿದರು. ಅವರು 'It is very difficult for the ordinary mind to think that God is seeable. Our privilege was to come in contact with a man who saw and talked with God' ಎಂದೆಲ್ಲ ನುಡಿದರು. ಎಂದು ಕುವೆಂಪು ದಾಖಲಿಸಿದ್ದಾರೆ. (ನೆ.ದೋ. ಪು 889)

ಅಲ್ಲಿ ಪ್ರಬುದ್ಧ ಭಾರತ ಸಂಪಾದಕ ಅಶೋಕಾನಂದ ಸ್ವಾಮಿಗಳನ್ನು ಕಂಡರು. ದೀಕ್ಷೆ ನಂತರ ಶಾಶ್ವತಾನಂದ ಸ್ವಾಮಿಗಳು ಒಂದು ಜಪಮಾಲೆ ಇಟ್ಟುಕೊಳ್ಳುವಂತೆ ಹೇಳಿದರು. ಕುವೆಂಪು ಅದನ್ನು ಸಂಪ್ರದಾಯ ಸಂಕೋಲೆಯ ಶಿಸ್ತು ಎಂದು ಸ್ವೀಕರಿಸಲಿಲ್ಲ.

ಕಲ್ಕತ್ತದಿಂದ ಅವರು ಪೂರಿಗೆ ಹೋದರು. ಪೂರಿಯ ಪ್ರಶಾಂತ ಸಮುದ್ರ ಕಂಡರು. ಅನಂತರ 1936ರಲ್ಲಿ ಆ ಸಮುದ್ರ ನೀಲಾಕರ್ಷಣೆಯನ್ನು 'ರಸಸಿದ್ಧಿ' ಸಾನೆಟ್‌ನಲ್ಲಿ ಕಡೆದಿಟ್ಟರು. ಪೂರಿಯಿಂದ ಮತ್ತೆ ರೈಲಿನಲ್ಲಿ ಪ್ರಯಾಣ ಮಾಡಿ ಮೈಸೂರಿಗೆ ಹಿಂತಿರುಗಿದರು.

**ಕವಿಚೇತನಕ್ಕೆ ಋಷಿತ್ವದ ದಿವ್ಯಾಗ್ನಿ ಸಂಸ್ಕಾರ**

ಕನ್ನಡ ಲೆಕ್ಚರರ್ ಆಗಿ ಶ್ರೀರಾಮಕೃಷ್ಣ ಆಶ್ರಮದಲ್ಲಿಯ ವಾಸವು ಕವಿಚೇತನಕ್ಕೆ ಋಷಿತ್ವದ ದಿವ್ಯಾಗ್ನಿ ಸಂಸ್ಕಾರ ನೀಡುವ ತಪಶ್ಚರ್ಯೆಯಾಗಿತ್ತು. ಶ್ರೀರಾಮಕೃಷ್ಣರನ್ನೇ



ಉದ್ದೇಶಿಸಿ ಬರೆದ 'ಧೃವತಾರೆ'-ಅಗಣಿತ ತಾರಾಗಣಗಳ ನಡುವೆ, ಮತ್ತು 'ಕುಕ್ಕನ ಹಳ್ಳಿಯ ಕೆರೆಯಾಚೆ' ಕವನಗಳಲ್ಲಿ ಆಗತಾನೆ ತೆಗೆದುಕೊಂಡ ಮಂತ್ರ ದೀಕ್ಷೆಯ ಪ್ರಭಾವವಿದೆ.

ಕುವೆಂಪು ಅವರು ಆಗ ನಡೆಯುತ್ತಿದ್ದ ಸ್ವಾತಂತ್ರ್ಯ ಸಂಗ್ರಾಮದ ರಣರೋಷದ ಬೆಂಕಿ ಕೆಂಡದಂತಹ 'ರಕ್ತಧುನಿ' ಮತ್ತು 'ಬೈಗುಗೆಂಪು' ಕವನಗಳನ್ನು ರಚಿಸಿದರು. 'ರಕ್ತಧುನಿ' ಉಗ್ರ ಕವನ 'ವಿಶ್ವಕರ್ನಾಟಕ'ದಲ್ಲಿ ತಿ. ತಾ. ಶರ್ಮರಿಂದ ಪ್ರಕಟವಾಯಿತು. ಒಡನೆಯೆ ಅದು ದೇಶಭಕ್ತ ಸತ್ಯಾಗ್ರಹಿಗಳೆಲ್ಲರ ಬಾಯಲ್ಲಿ ಖಡ್ಗ ಜಿಹ್ವೆಯಾಗಿ ಝಳಪಿಸತೊಡಗಿತು. 'ರಕ್ತಧುನಿ' ನೇರವಾಗಿ ರಕ್ತ ಕ್ರಾಂತಿಯ ಆಗಮನವನ್ನು ಸಾರಿ ಆಹ್ವಾನಿಸುತ್ತದೆ:

ಬರುತಲಿದೆ! ಬರುತಲಿದೆ!<br>
ವಿಪ್ಲವದ ರಕ್ತಧುನಿ<br>
ನೋಡು ಹರಿದು ಬರುತಿದೆ!<br>
ಬೇನೆವಸಿರಿನಿಂದ ಚಿಮ್ಮಿ<br>
ದಾಸ್ಯ ಶಿಲೆಯ ನೊಡೆದು ಹೊಮ್ಮಿ,<br>
ಶ್ರೀಮಂತರ ಕೊಳಕ ಬಿಚ್ಚಿ,<br>
ಹಳೆತನೆಲ್ಲ ಕೊಚ್ಚಿ ಕೊಚ್ಚಿ<br>
ನೋಡು ನುಗ್ಗಿ ಬರುತಿದೆ!

ಅದು ಸಭೆ ಸಭೆಗಳಲ್ಲಿ ಪ್ರಥಮದಲ್ಲಿಯೆ ಪ್ರಾರ್ಥನೆಯ ರೂಪದಲ್ಲಿ ಆವೇಶದಿಂದ ಘೋಷಿತವಾಗುತ್ತಿತ್ತು. ಅದು ಸ್ವಾತಂತ್ರ್ಯ ಸಂಗ್ರಾಮಕ್ಕೆ ರಕ್ತಕ್ರಾಂತಿಯ ಕರೆಕೊಡುವ ರುದ್ರ ಗೀತೆಯಾಗಿ ಬಿಟ್ಟಿತ್ತು.

ಅವರು 1930 ಜನವರಿಯಲ್ಲಿ ರಚಿಸಿದ ಕವನ 'ಕುಮಾರವ್ಯಾಸ' ಕಲಿಯುಗವನ್ನು ದ್ವಾಪರವಾಗಿಸುವ ಅದ್ಭುತ ಕವಿತೆ. ಅದು 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟವಾದಾಗ ಸಾಹಿತ್ಯ ವಲಯದಲ್ಲಿ ಬೆರಗನ್ನುಂಟು ಮಾಡಿತು.





ಸ್ವಾಮಿ ಸಿದ್ದೇಶ್ವರಾನಂದರು ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದ ಅಧ್ಯಕ್ಷರಾಗಿ ಬೀಳ್ಕೊಡುವವರೆಗೆ ಕುವೆಂಪು '1926ರಿಂದ 1930ರ ತುದಿವರೆಗೆ ನಾನು ಅವರ ನಿರಂತರ ಸಾನ್ನಿಧ್ಯದಲ್ಲಿದ್ದೆ' ಎಂದು ತೃಪ್ತ ಭಾವವನ್ನು ವ್ಯಕ್ತಪಡಿಸಿದ್ದಾರೆ. ಅನಂತರ ಸ್ವಾಮೀಜಿ ಫ್ರಾನ್ಸಿಗೆ ಹೋಗಿ ಪ್ಯಾರಿಸ್ಸಿನಲ್ಲಿ ಶ್ರೀರಾಮಕೃಷ್ಣಾಶ್ರಮ ಸ್ಥಾಪಿಸಿದರು. ಅವರು ಸದಾ ಕುವೆಂಪು ಅವರಿಗೆ ಪತ್ರ ಬರೆದು ಆಶೀರ್ವದಿಸುತ್ತಿದ್ದರು. ಅದೊಂದು ಅಪರೂಪದ ಗುರು ಶಿಷ್ಯ ಬಾಂಧವ್ಯ.

ಕುವೆಂಪು ಅವರು ನವೆಂಬರ್ 1930ರಲ್ಲಿ ಶಿವಮೊಗ್ಗೆ ಕರ್ನಾಟಕ ಸಂಘದ ಆರಂಭೋತ್ಸವದ ಉಪಕ್ರಮಣ ಭಾಷಣ ಮಾಡಿದರು. ಅದು 'ಸಾಹಿತ್ಯ ಪ್ರಚಾರ'ವೆಂದು ಅಚ್ಚಾಯಿತು. ಆ ಸಂಘದಲ್ಲಿ ಅವರು ಸಾಹಿತ್ಯಾಸಕ್ತರಿಗೆ 'ಕಿರಿಯ ಕಾಣಿಕೆ,' 'ತಳಿರು', 'ಕೊಳಲು,' 'ಮಲೆನಾಡಿಗೆ ಬಾ', 'ಸಬಕ್ತಗೀನ್,' 'ತಾನಾಜಿ' 'ವಿಮರ್ಶಕ', 'ಕಲ್ಕಿ' ಹೇಳಿ ಹಾಡಿ ಕಾವ್ಯದ ಹೊಸಯುಗದ ಪ್ರವಾಹ ಹೊರಳಿಸಿದರು.

22-2-1931ರಂದು ಒಂಟಿಕೊಪ್ಪಲಿನ ಹೊಸಕಟ್ಟಡದಲ್ಲಿ ಗುರು ಮಹಾರಾಜರ ಜನ್ಮೋತ್ಸವ ನಡೆಯಿತು. ಕುವೆಂಪು ಅವರು 'ಹಿಂದೂ ಧರ್ಮ ಮತ್ತು ಶ್ರೀರಾಮಕೃಷ್ಣ' ಎಂಬ ಲೇಖನ ಓದಿದರು. ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು 'ಭಗವದ್ಗೀತೆ ಮತ್ತು ಶ್ರೀ ರಾಮಕೃಷ್ಣ' ವಿಚಾರವಾಗಿ ಮಾತನಾಡಿದರು.

ಕರ್ನಾಟಕ ಸಂಘದ ವಾರ್ಷಿಕೋತ್ಸವ ಮಹಾರಾಜ ಕಾಲೇಜಿನಲ್ಲಿ ನಡೆದಾಗ ಅದರ ಅಧ್ಯಕ್ಷತೆ ವಹಿಸಿದವರು ಪಂಜೆ ಮಂಗೇಶರಾಯರು. ಅವರು ಭಾವವಶರಾಗಿ ಕುವೆಂಪು ಅವರನ್ನು ನೋಡಿದಾಗ, ಕುವೆಂಪು ಆನಂದದಲ್ಲಿ ಕೊಚ್ಚಿ ಹೋದೆ ಎಂದು ಆತ್ಮಕಥೆಯಲ್ಲಿ ಬರೆದಿದ್ದಾರೆ.

ಮೇ 1931ರಲ್ಲಿ ದೇವಂಗಿಯಲ್ಲಿ ಹುಡುಗರು 'ನನ್ನ ಗೋಪಾಲ' ನಾಟಕ ಆಡಿದರು. ಅದೇ ವರ್ಷ ಜೂನ್‌ನಲ್ಲಿ ಶಿವಮೊಗ್ಗದಲ್ಲಿ 'ಯಮನ ಸೋಲು' ನಾಟಕ ನಡೆಯಿತು. ಕುವೆಂಪು ಸತ್ಯವಾನ್ ಪಾತ್ರ ವಹಿಸಿದ್ದರು. ಅವರು ಸದಾ



ಅಧ್ಯಯನಶೀಲರಾಗಿ ಹರಿಶ್ಚಂದ್ರ ಕಾವ್ಯ, ಎ. ಸಿ. ಬ್ರಾಡ್ಲೇಯ Oxford Lectures on poetry ವಿಲ್ ಡ್ಯೂ ರಾಂಟ್‌ರ The Story of philosophy, ಬರ್ನಾಡ್ ಷಾ ನಾಟಕಗಳು, Rufus Jones ನ Some Experiments of Mysticism, ರಸ್ಕಿನ್‌ರ Unto This Last, ಅಯ್ಲಮರ್ ಮಾಡ್ ಅವರ ಟಾಲ್‌ಸ್ಟಾಯ್ ಜೀವನ ಚರಿತ್ರೆ, ಕಾದಂಬರಿಗಳು Essays and Letters ಓದಿದರು.

ಅವರು ಚಿತ್ರಶಿಲ್ಪಿ ಕೆ. ವೆಂಕಟಪ್ಪನವರ ಕಲಾಶಾಲೆಗೆ ಹೋಗಿ ಅವರೊಡನೆ ಪ್ರಕೃತಿ ವೈಭವ, ಸೌಂದರ್ಯ ಕಲಾ, ಕವನ, ಶಿಲ್ಪಗಳ ವಿಚಾರವಾಗಿ ಮಾತನಾಡುತ್ತಿದ್ದರು. ಏಪ್ರಿಲ್ 1932 ರಲ್ಲಿ ಶಿವಮೊಗ್ಗ ಕರ್ನಾಟಕ ಸಂಘದಲ್ಲಿ 'ಶ್ಮಶಾನ ಕುರುಕ್ಷೇತ್ರ' ನಾಟಕ ಓದಿದರು. ಪುರಸಭಾ ಭವನದಲ್ಲಿ ಜನ ಕಿಕ್ಕಿರಿದಿದ್ದರು.

**ವೈಚಾರಿಕ ವೈಜ್ಞಾನಿಕ ಚಿಂತನೆಗಳ ಪ್ರಚಾರ**

ಕುವೆಂಪು ಅವರು 'ಮಲೆನಾಡು ಒಕ್ಕಲಿಗ ಯುವಕ ಸಂಘ'ದ ಪ್ರಾರಂಭೋತ್ಸವಕ್ಕೆ ಬೆಟ್ಟ ಗುಡ್ಡ ಕಾಡುಗಳ ಒಳದಾರಿಯಲ್ಲಿರುವ 'ಹಿರೇತೋಟ'ಕ್ಕೆ ಹೋಗಿದ್ದರು. ಜೂನ್ 1932ರಲ್ಲಿ ಮಾಳೂರು ಪ್ರವಾಸಿ ಮಂದಿರದಲ್ಲಿ ಸಂಘವನ್ನು ಪ್ರಾರಂಭಿಸಿ ಮಾತನಾಡಿದರು. ಹೊಸಮನೆ ಮಂಜಪ್ಪಗೌಡರು ಅಧ್ಯಕ್ಷರಾಗಿದ್ದರು. ಕುವೆಂಪು ಅವರು ಒಕ್ಕಲಿಗರನ್ನು ಬ್ರಾಹ್ಮಣರು ಮತ್ತು ಕ್ರೈಸ್ತ ಪಾದ್ರಿಗಳು ಒಡ್ಡಿದ ಮತಮೌಢ್ಯಗಳಿಂದ ಬಿಡುಗಡೆಗೊಳಿಸುವುದು ಮುಖ್ಯವೆಂದು ತಿಳಿದಿದ್ದರು. ಅವರು 'ನಮ್ಮವರನ್ನು ಈ ಹಳೆಯ ಮತಮೌಢ್ಯ ಸಂಕುಲಗಳಿಂದ ಪಾರುಮಾಡಿ, ಅವರಿಗೆ ವೈಚಾರಿಕತೆಯನ್ನು ವೈಜ್ಞಾನಿಕತೆಯನ್ನೂ ನೀಡಿ, ನಿಜವಾದ ಉಪನಿಷತ್ ಪ್ರಣೀತವಾದ ವೇದಾಂತದ ಅಧ್ಯಾತ್ಮ ಶ್ರೀಯೆಡೆಗೆ ಅವರನ್ನು ಕರೆದೊಯ್ಯಬೇಕು ಎಂಬುದು ನನ್ನ ಉದ್ದೇಶವಾಗಿತ್ತು' ಎಂದು ತಿಳಿಸಿ ಮತ್ತೆ ಮುಂದುವರಿಸುತ್ತ, 'ಜಕ್ಕಿಣಿ, ಪಂಜ್ರೊಳ್ಳಿ, ಭೂತ, ದೆವ್ವ ಮೊದಲಾದವುಗಳಿಗೆ ಬಲಿಕೊಟ್ಟು ಪೂಜೆ





ಮಾಡುವುದರ ಬದಲು ತಾತ್ವಿಕವೂ ನಾಗರಿಕವೂ ಆಗಿರುವ ಭಾವನೆಗಳನ್ನು ಆಶ್ರಯಿಸಲು ಕರೆಕೊಟ್ಟಿದ್ದೆ"[4] ಎಂದು ಬರೆದಿದ್ದಾರೆ

ಅನಂತರ ಮೇ 1933ರಲ್ಲಿ ಅವರು ಮಲೆನಾಡು ಯುವಕರ ಸಂಘದ ವಾರ್ಷಿಕೋತ್ಸವಕ್ಕೆ 'ಕುಡಿಮಲ್ಲಿಗೆ'ಗೆ ಹೋಗಿ ಮಾತಾಡಿದ್ದು ಅದು 'ನಿರಂಕುಶಮತಿಗಳಾಗಿ' ಎಂದು ಪುಸ್ತಕ ರೂಪದಲ್ಲಿ ಅಚ್ಚಾಯಿತು.

ಕುವೆಂಪು ಅವರು ಬೇಸಿಗೆ ರಜೆಗೆ ಇತರ ಹುಡುಗರೊಡನೆ ಊರಿಗೆ ಹೋಗಿದ್ದಾಗ 'ಮಲೆನಾಡು ಯುವಕ ಸಂಘ' ದವರು ಬೇರೆ ಬೇರೆ ಊರುಗಳಲ್ಲಿ ವಾರ್ಷಿಕೋತ್ಸವ ಏರ್ಪಡಿಸುತ್ತಿದ್ದರು. ಅದರಿಂದ ಆ ಸೀಮೆಯ ಯುವಕರು ವಿಚಾರವಾದಿ ಮನೋಧರ್ಮ ಬೆಳೆಸಿಕೊಳ್ಳಲು ಕಾರಣವಾಯಿತು. ಆ ಸಭೆಗಳಲ್ಲಿ 'ನಿಮ್ಮ ಕನ್ಯೆಯರಿಗೆ ಸೇರು ಬಂಗಾರದ ಕೊರಳ ಹಾರಕ್ಕಿಂತಲೂ ಮುದ್ದಾದ ಕನ್ನಡದ ಅಕ್ಷರ ಮಾಲೆಯ ರಮಣೀಯತರವಾದ ಅಲಂಕಾರವೆಂದೂ ನಾನು ಧೈರ್ಯವಾಗಿ ಹೇಳಬಲ್ಲೆ' ಎಂದು ಉಪನ್ಯಾಸ ಮಾಡಿ ಹೆಣ್ಣು ಮಕ್ಕಳಿಗೆ ವಿದ್ಯೆ ಕಲಿಸಲು ಪ್ರಚಾರ ಮಾಡುತ್ತಿದ್ದರು. ಆ ಸಂಘದವರು ಮೇ 1934ರಲ್ಲಿ ಇಂಗ್ಲಾದಿಯಲ್ಲಿ ವಿಜೃಂಭಣೆಯಿಂದ ಕುವೆಂಪು ಅಧ್ಯಕ್ಷತೆಯಲ್ಲಿ ವಾರ್ಷಿಕೋತ್ಸವ ಆಚರಿಸಿದರು. ತೀರ್ಥಹಳ್ಳಿ, ಕೊಪ್ಪ, ಮಂಡಗದ್ದೆ, ಮೇಗರವಳ್ಳಿ ಕಡೆಯಿಂದ ಅನೇಕ ಜನರು ಸೇರಿದ್ದರು. 'ಜಲಗಾರ' ನಾಟಕ ಆಡಿದರು. ಕೃಷ್ಣಗಿರಿ ಕೃಷ್ಣರಾಯರು ಭಾರತವಾಚನ ಮಾಡಿದರು.

**ಅವರ ಚಿಂತನಶೀಲ ಕ್ರಾಂತಿಕಾರಕ ಗೀತೆಗಳು:**

ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು?

---

4. ನೆ. ದೋ. ಪು. 975



ಎಂದೊ ಮನು ಬರೆದಿಟ್ಟುದಿಂದೆಮಗೆ ಕಟ್ಟೇನು?
ನಿನ್ನೆದೆಯ ದನಿಯೆ ಋಷಿ! ಮನು ನಿನಗೆ ನೀನು!

**(ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?: ಕೋಗಿಲೆ ಮತ್ತು ಸೋವಿಯತ್ ರಷ್ಯಾ)**

ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರಬನ್ನಿ,
ಬಡತನವ ಬುಡಮುಟ್ಟ ಕೀಳಬನ್ನಿ.
ಮೌಢ್ಯತೆಯ ಮಾರಿಯನು ಹೊರದೂಡಲೈ ತನ್ನಿ,
ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ.
ಓ ಬನ್ನಿ, ಸೋದರರೆ ಬೇಗ ಬನ್ನಿ

**(ಓ ಬನ್ನಿ, ಸೋದರರೆ ಬೇಗ ಬನ್ನಿ: ಕೋಗಿಲೆ ಮತ್ತು ಸೋವಿಯತ್ ರಷ್ಯಾ)**

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!

**(ಇಂದಿನ ದೇವರು: ಪಾಂಚಜನ್ಯ)**

'ಶ್ರೀ ಸಾಮಾನ್ಯ'ವೆ ಭಗವನ್ ಮಾನ್ಯಂ;
'ಶ್ರೀ ಸಾಮಾನ್ಯ'ನೆ ಭಗವದ್ ಧನ್ಯಂ!
ಸಾಮಾನ್ಯತೆ ಭಗವಂತನ ರೀತಿ;
ಸಾಮಾನ್ಯವೆ ದಿಟ ಭಗವತ್ ಪ್ರೀತಿ!

**(ಶ್ರೀ ಸಾಮಾನ್ಯ'ರ ದೀಕ್ಷಾಗೀತೆ: ಇಕ್ಷುಗಂಗೋತ್ರಿ)**

## ಸೆಂಟ್ರಲ್ ಕಾಲೇಜಿನಲ್ಲಿ ಕಾವ್ಯವಾಚನ

ಪಠ್ಯಪುಸ್ತಕ ಸಮಿತಿಯ ಸಭೆಗೆ ಬೆಂಗಳೂರಿಗೆ ಕುವೆಂಪು ಹೋಗಿದ್ದಾಗ ವಿ.ವಿ.ಪುರಂನಲ್ಲಿದ್ದ ಶ್ರೀರಾಮಕೃಷ್ಣಾಶ್ರಮಕ್ಕೆ ಹೋಗಿದ್ದರು. ಪ್ರೊ.ಎ.ಆರ್.

ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನ ಗಣಿತ ಭವನದಲ್ಲಿ ಕುವೆಂಪು ಅವರ ಕವಿತಾ ವಾಚನವನ್ನು ನವಂಬರ್ 1932ರಲ್ಲಿ ಏರ್ಪಡಿಸಿದ್ದರು. ಸಾವಿರಾರು ಜನ ನೆರೆದಿದ್ದರು. ಆ ಸಭೆಯಲ್ಲಿ ಬಿ. ಎಂ. ಶ್ರೀ. ಟಿ. ಎಸ್. ವೆಂ., ಎಂ. ಆರ್. ಶ್ರೀನಿವಾಸ ಮೂರ್ತಿ, ವೀ. ಸೀ ಮುಂತಾದ ಗಣ್ಯರು ಇದ್ದರು. ಕುವೆಂಪು ಕೇಳುಗರ ಒತ್ತಾಯದ ಮೇಲೆ ಎರಡು ಗಂಟೆಗಳ ಕಾಲ ಅವಿಚ್ಛಿನ್ನವಾಗಿ ಕವನಗಳನ್ನು ವಾಚನ ಮಾಡಿದರು. ಆ ಸಭೆಯ ವಾರ್ತೆ ಪ್ರಕಟಪಡಿಸಿದ 'ತಾಯಿನಾಡು' ಹೀಗೆ ವರದಿ ಮಾಡಿತ್ತು: 'ಪುಟ್ಟಪ್ಪನವರ ಕವಿತಾ ಪ್ರತಿಭೆಯು ಇಂದಿನ ಭಾರತದ ಪ್ರತಿಬಿಂಬವು. ಶ್ರೀ ಪುಟ್ಟಪ್ಪನವರು ಇತೋಪ್ಯತಿಶಯವಾದ ಸರಸ್ವತಿ ಪ್ರಸಾದವನ್ನು ಪಡೆದು ಕನ್ನಡ ಭೂಮಿಗೆ ಮಾತ್ರವೇ ಅಲ್ಲದೆ ಭರತ ಭೂಮಿಗೂ ಶಿರೋರತ್ನವಾಗಿ ಪರಿಣಮಿಸಲಿ ಎಂಬುದೇ ಕನ್ನಡಿಗರೆಲ್ಲರ ಹಾರೈಕೆ.'

ಕುವೆಂಪು ಅವರು ಸ್ವಾಮಿ ವಿವೇಕಾನಂದ ಮತ್ತು ಶ್ರೀರಾಮಕೃಷ್ಣ ಪರಮಹಂಸರ ಅಧ್ಯಾತ್ಮ ಮಾರ್ಗಾನುಯಾಯಿಯಾಗಿದ್ದು, ಸದಾ ಅವರ ಧ್ಯಾನದಲ್ಲಿರುತ್ತಿದ್ದರು. ಅವರು 1932ರಲ್ಲಿ ಸ್ವಾಮಿ ವಿವೇಕಾನಂದ–ಜೀವನ ಚರಿತ್ರೆ, 1934ರಲ್ಲಿ ಶ್ರೀರಾಮಕೃಷ್ಣ ಪರಮಹಂಸ–ಜೀವನ ಚರಿತ್ರೆ ರಚಿಸಿದರು.

### ಕುವೆಂಪು ಕಾವ್ಯದ ಕ್ರಾಂತಿಕಾರಕ ಗುಣ

ಮಡಿಕೇರಿಯಲ್ಲಿ 28–12–1932 ರಂದು ಡಿ.ವಿ.ಗುಂಡಪ್ಪನವರ ಅಧ್ಯಕ್ಷತೆಯಲ್ಲಿ 18ನೇ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ತಾ 31–12–1932 ರಂದು ಬೆಳಿಗ್ಗೆ ಅಧಿವೇಶನದಲ್ಲಿ ನವೋದಯ ಕವಿಗಳ ಕವನಗಳ ವಾಚನವನ್ನು ರಾಜರತ್ನಂ ಮತ್ತು ಕುವೆಂಪು ಮಾಡಿದರು.

ಆಗ ಕೊಡಗು ಬ್ರಿಟೀಷರ ಆಳ್ವಿಕೆಯಲ್ಲಿತ್ತು. ಕುವೆಂಪು ದೇಶಿ ಸಂಸ್ಥಾನ ಮೈಸೂರಿನಿಂದ ಹೋಗಿದ್ದರು. ಅಲ್ಲಿಯ ಜನ ಲಾಠಿ ಏಟು ತಿಂದು ಸೆರೆಮನೆಗೆ ಹೋಗಿದ್ದವರು. ಅವರಿಗೆ ಕುವೆಂಪು ವಾಚಿಸಿದ 'ಸತ್ಯಾಗ್ರಹಿ', 'ಇಂದಿನ ದೇವರು', 'ಮಹಾತ್ಮ ಗಾಂಧಿ', 'ಮತಿಲಾಲ ನೆಹರು', 'ಭರತ ಮಾತೆ', 'ಕಲ್ಕಿ', 'ಪಾಂಚಜನ್ಯ'



ದೇಶಭಕ್ತಿ ಕವನಗಳು ಬರಿ ಕವನಗಳಾಗಿರಲಿಲ್ಲ, ಅಗ್ನಿಸ್ಫೋಟಕ ವಸ್ತುಗಳಾಗಿದ್ದವು. ಕುವೆಂಪು 'ಭಾರತ ತಪಸ್ವಿನಿ'ಗೆ ಎಂಬ ಸಾನೆಟ್ಟನ್ನು ಧೀರಧ್ವನಿಯಿಂದ ಓದಿ ಮುಗಿಸಿದ್ದೇ ತಡ ಸಭೆಯಲ್ಲಿ ಅಣು ಸ್ಫೋಟವಾದಂತಾಯಿತು. ಸತ್ಯಾಗ್ರಹಿ ಯುವಕರು ಅಲ್ಲಲ್ಲಿ ಎದ್ದು ನಿಂತು 'ಮಹಾತ್ಮ ಗಾಂಧೀ ಕೀ ಜೈ!' 'ಭಾರತಮಾತಾ ಕೀ ಜೈ', 'ಕಾಂಗ್ರೆಸ್ ಜಿಂದಾಬಾದ್', 'ಬ್ರಿಟೀಷರಿಗೆ ಧಿಕ್ಕಾರ' ಘೋಷಣೆ ಕೂಗಿ ಅಬ್ಬರಿಸಿದರು. ಪೊಲೀಸರು ಅವರನ್ನೆಲ್ಲ ದಸ್ತಗಿರಿ ಮಾಡಿದರು! ಇದು ಕುವೆಂಪು ಕಾವ್ಯದ ಕ್ರಾಂತಿಕಾರಕ ಗುಣ.

**'No body knew that Kannada had such power before you wrote'**

ಬನುಮಯ್ಯನವರ ಶಾಲೆಯಲ್ಲಿ ಜನವರಿ 1933ರಲ್ಲಿ ವಿವೇಕಾನಂದ ಜನ್ಮೋತ್ಸವ ನಿಮಿತ್ತ ಸಾರ್ವಜನಿಕ ಸಭೆ ಏರ್ಪಾಡಾಗಿತ್ತು. ಮದರಾಸಿನ ತತ್ತ್ವಶಾಸ್ತ್ರ ಪ್ರೊ॥ ಪಿ.ಎನ್ ಶ್ರೀನಿವಾಸಾಚಾರ್ಯ, ಪ್ರೊ॥ ಟಿ. ಎಸ್. ವೆಂಕಣ್ಣಯ್ಯ, ಪಿ. ಕೋದಂಡರಾಯ ಸಭೆಯಲ್ಲಿದ್ದರು. ಕುವೆಂಪು ಕವನ 'ಸಂನ್ಯಾಸಿ' ಮತ್ತು 'ಗೊಲ್ಲನಗಾಯತ್ರಿ'ಯನ್ನು ಸ್ನೇಹಿತರು ವಾಚಿಸಿದರು. ಆ ಸಭೆಗೆ ಬಂದಿದ್ದ ಶ್ರೀಮಾನ್ ವೆಂಕಟಕೃಷ್ಣಯ್ಯ (ತಾತಯ್ಯ) ನವರು ಕುವೆಂಪು ಅವರನ್ನು ಹತ್ತಿರ ಕರೆದು 'you are a most spirited youth. No body knew that Kannada had such power before you wrote. I am immensly glad.' ಎಂದು ಹೇಳಿದರು (ನೆ. ದೋ. ಪು. 993).

1933 ಪೆಬ್ರವರಿಯಲ್ಲಿ ಕಾನಕಾನಹಳ್ಳಿ ವೆಂಕಟರಾಮಯ್ಯನವರು ಸರ್ದಾರ್ ಎಂದು ದೇಶಭಕ್ತರಿಂದ ಬಿರುದು ಪಡೆದಿದ್ದರು. ಅವರು ಪೊಲೀಸರ ಕೈಗೆ ಸಿಕ್ಕದೆ ತಲೆ ತಪ್ಪಿಸಿಕೊಂಡು ಬಂದು ಕುಪ್ಪಳಿಯ ಉಪ್ಪರಿಗೆಯಲ್ಲಿ ಅವಿತುಕೊಂಡಿದ್ದರು. ಅವರು 'ಕವಿಶೈಲ'ದಲ್ಲಿ ಕೆತ್ತಿದ ದೇವನಾಗರಿ ಲಿಪಿಯಲ್ಲಿಯ ಹಿಂದೀ ಪಕ್ತಿಗಳು:





‘ನಾಮೀ ಪತ್ಥರ್ ಪರ್
ನಾಮ್ ಕವಿಯೋಂಕೆ ಅಮರ್’

* * *

‘ಹೆಸರು ಪಡೆದ ಅರೆಯ ಮೇಲೆ
ಕವಿಯ ಹೆಸರು ಅಮರವಾಯ್ತು’

ಕುವೆಂಪು ಅವರು ಕುಪ್ಪಳಿಯಲ್ಲಿ ತಂಗಿ ರಾಜಮ್ಮ, ಕಮಲಾಕ್ಷಮ್ಮ, ವೆಂಕಟಯ್ಯ, ಗೋಪಾಲ, ಓಬಯ್ಯರಿಗೆ ಕವಿತೆಗಳನ್ನು ಹೇಳುತ್ತಿದ್ದರು. ಜೊತೆಗೆ ದೇವರು, ಸಂಸ್ಕೃತಿ ವಿಚಾರ ತಿಳಿಸಿ ಸ್ತ್ರೀಯರು ಸ್ತ್ರೀಯರ ಪುರೋಭಿವೃದ್ಧಿಗೆ ಪ್ರಯತ್ನಿಸಬೇಕೆಂದು ತಿಳಿ ಹೇಳುತ್ತಿದ್ದರು. ಇದು ಅವರು ಕುಟುಂಬದಲ್ಲಿ ಉಂಟುಮಾಡುತ್ತಿದ್ದ ಸಾಹಿತ್ಯಾಸಕ್ತಿ ಮತ್ತು ವೈಚಾರಿಕ ಜಾಗೃತಿಯಾಗಿತ್ತು. ಅವರು 1933ರಲ್ಲಿ ‘ಮಲೆನಾಡಿನ ಚಿತ್ರಗಳು’ ಗದ್ಯ ಚಿತ್ರಗಳ ಸಂಕಲನ ಪ್ರಕಟಿಸಿದರು.

**‘ಕಾನೂರು ಹೆಗ್ಗಡತಿ’ ‘ಚಿತ್ರಾಂಗದಾ’**

ಟಾಲ್‌ಸ್ಟಾಯ್, ರೋಮಾರೋಲಾ, ಥಾಮಸ್ ಹಾರ್ಡಿ, ಗಾಲ್ಸ್‌ವರ್ದಿ ಮೊದಲಾದವರ ಕಾದಂಬರಿಗಳನ್ನು ಓದಿದ ಕುವೆಂಪು ಅಂತಹ ಕಾದಂಬರಿ ಬರೆಯಲು ಹಂಬಲಿಸಿದರು. ಪ್ರೊ॥ ವೆಂಕಣ್ಣಯ್ಯನವರ ಸೂಚನೆಯಂತೆ ‘ಮಹಾಕಾದಂಬರಿ’ ಬರೆಯಲು ತೊಡಗಿದರು. ‘ಕಾನೂರು ಹೆಗ್ಗಡತಿ’ ರಚಿಸಿದರು. ಅದು 1936ರಲ್ಲಿ ‘ಕಾವ್ಯಾಲಯ’ ಪ್ರಕಾಶನ ಸಂಸ್ಥೆಯಿಂದ ಪ್ರಕಟವಾಯಿತು. ಅವರಿಂದಲೆ ಅದೇ ವರ್ಷದಲ್ಲಿ ‘ಚಿತ್ರಾಂಗದಾ’ ಖಂಡಕಾವ್ಯ ಪ್ರಕಟವಾಯಿತು. ಅದು ಪ್ರೇಮ–ತಪಸ್ಸುಗಳ ಒಂದು ವಿಶಿಷ್ಟ ಸಂಯೋಜನೆಯ ಪ್ರೇಮಕಾವ್ಯ. ಅಲ್ಲಿ ವಿಜಯ ಪತಾಕೆ ಹಾರಿಸುವುದು ಪ್ರೇಮ. ಮಲೆನಾಡಿನ ಜನಜೀವನದ, ಪ್ರಾಕೃತಿಕ, ಸಾಂಸ್ಕೃತಿಕ ಚಿತ್ರಣದೊಂದಿಗೆ ವೈಚಾರಿಕ ಕ್ರಾಂತಿಗೆ ಒಳಗಾದ ವಿಕಾಸಪಥದ ಹೆಜ್ಜೆ ಗುರುತುಗಳು ಅವರ ಎರಡು ಬೃಹತ್ತಾದ ‘ಕಾನೂರು ಹೆಗ್ಗಡತಿ’



ಮತ್ತು 'ಮಲೆಗಳಲ್ಲಿ ಮದುಮಗಳು' (1967). ಕಾದಂಬರಿಗಳಲ್ಲಿವೆ. ಅವು ಅವರ ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಯ ಸಾಕಾರ ಕೃತಿಗಳಾಗಿವೆ.

**ಹುಬ್ಬಳ್ಳಿ ಸಾಹಿತ್ಯ ಸಮ್ಮೇಳನದಲ್ಲಿ ಕವಿ ಸಮ್ಮೇಳನದ ಅಧ್ಯಕ್ಷ**

ಹುಬ್ಬಳ್ಳಿಯಲ್ಲಿ ನಾಗೇಶ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಕುವೆಂಪು ಅವರು ಕವಿ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಅವರು ಪ್ರೊ॥ ವೆಂಕಣ್ಣಯ್ಯ ಅವರ ಜೊತೆ ರೈಲಿನಲ್ಲಿ ಹೋದರು. 28-12-1933 ರಂದು ಸಮ್ಮೇಳನದ ಅಧ್ಯಕ್ಷರು ಮತ್ತು ಕವಿಸಮ್ಮೇಳನದ ಅಧ್ಯಕ್ಷರನ್ನು ಆನೆಯ ಮೇಲೆ ಮೆರವಣಿಗೆ ಮಾಡುವುದಾಗಿ ತಿಳಿಸಿದ್ದರು. ಬೀದಿ ಮೆರವಣಿಗೆಯ ಬದ್ಧ ವಿರೋಧಿಯಾದ ಕುವೆಂಪು ಅಂದು ಹುಬ್ಬಳ್ಳಿಗೆ ಹೋಗದೆ ಮಾರನೆ ದಿನ ಹೋದರು!

ಕುವೆಂಪು ಅವರು 'ಕುಮಾರವ್ಯಾಸ', 'ಕಲ್ಕಿ'ಯನ್ನು ನಾಟಕೀಯವಾಗಿಯೂ, 'ಭಾರತ ತಪಸ್ವಿನಿ'ಯನ್ನು ಓಜೋಯುಕ್ತವಾಗಿಯೂ ವಾಚಿಸಿದರು. ಅದನ್ನು ಕೇಳಿ ಜನೋತ್ಸಾಹ ಸಮುದ್ರದಂತೆ ಬೋರ್ಗರೆಯಿತು! ಕವಿಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ 'ಕಾವ್ಯದ ಕಣ್ಣು ಕವಿಯ ದರ್ಶನದಲ್ಲಿ' ಕುರಿತು ಮಾತನಾಡಿದರು. ಅಲ್ಲಿ ಆಲೂರು ವೆಂಕಟರಾಯರು, ಶ್ರೀನಿವಾಸರಾವ್ ಕೌಜಲಗಿ, ಮುದುವೀಡು ಕೃಷ್ಣರಾಯರ ಭೇಟಿಯಾಯಿತು. 'ಮಹಾರಾಷ್ಟ್ರ ಮಂಡಳಿ'ಯಲ್ಲಿ 'ತಾನಾಜಿ' ಲಾವಣಿ ವಾಚಿಸಿದರು. ಲಿಂಗಾಯತ ಮಂದಿರದಲ್ಲಿ ಕವನಗಳನ್ನು ಓದಿದರು.

ಅವರು 'ಪಾಂಚಜನ್ಯ' ಸಂಕಲನದ ಕ್ರಾಂತಿ ಕವನಗಳನ್ನು 1933ರಲ್ಲಿ ಪ್ರಕಟಿಸಿದರು. ಅದೇ ರೀತಿಯ ಕವನಗಳು 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' (1944) ಕವನಸಂಕಲನದಲ್ಲಿವೆ. ಅವರ ಪ್ರಕೃತಿ ಪ್ರಧಾನ ಕವನ ಸಂಕಲನಗಳು 'ನವಿಲು' (1934), 'ಕಲಾ ಸುಂದರಿ' (1934), 'ಪಕ್ಷಿಕಾಶಿ' (1946). ಅನುಭಾವ ಪ್ರಧಾನ ಕವನ ಸಂಕಲನಗಳು: 'ಅಗ್ನಿಹಂಸ' (1946). 'ಅನಿಕೇತನ' (1963), 'ಕುಟೀಚಕ' (1967).

ಕುವೆಂಪು ಅವರು ಕುಪ್ಪಳಿಯಲ್ಲಿ ಶ್ರೀ ರಾಮಕೃಷ್ಣ ಜನ್ಮೋತ್ಸವವನ್ನು ಮೇ 1934 ರಲ್ಲಿ ಆಚರಿಸಿದರು. ಉಪ್ಪರಿಗೆಯ ಮಳಿಗೆ ಕೋಣೆಯನ್ನು ತೋರಣಗಳಿಂದ ಅಲಂಕರಿಸಿದ್ದರು. ಗುರುದೇವ, ಮಹಾಮಾತೆ, ಸ್ವಾಮೀಜಿಯವರ ಚಿತ್ರಪಟಗಳನ್ನು ವೇದಿಕೆ ರಚನೆ ಮಾಡಿ ಸ್ಥಾಪಿಸಿದ್ದರು. ಎಲ್ಲರೂ ಒಟ್ಟಿಗೆ 'ಬಾ ಶ್ರೀ ಗುರುದೇವನೆ ಬಾ' ಎನ್ನುವ 'ಆಹ್ವಾನ' ಗೀತೆ ಹಾಡಿದರು. 'ಪ್ರಾರ್ಥನೆ' ಪುಸ್ತಕಗಳಿಂದ ಮಂತ್ರಗಳನ್ನೂ, ಸ್ತೋತ್ರಗಳನ್ನು ಪಠಿಸಿ ಪ್ರಾರ್ಥಿಸಿದರು.

**ರಾಜಕುಮಾರ ಜಯಚಾಮರಾಜ ಒಡೆಯರ್ : ಕನ್ನಡ ಪಾಠ**

ರಾಜಕುಮಾರ ಜಯಚಾಮರಾಜ ಒಡೆಯರ್ ಇಂಟರ್ ಕಾಲೇಜಿಗೆ ಸೇರಿದ್ದರು. ಅವರ ಜೊತೆಗಾರ ವಿದ್ಯಾರ್ಥಿ ಶೇಷಾದ್ರಿ ಅವರೊಡನೆ ಇರುತ್ತಿದ್ದರು. ಕನ್ನಡದ ವಿಷಯಕ್ಕೆ ವಾರಕ್ಕೆ ಒಂದು ಸಲ ಅಥವಾ ಎರಡು ಸಲ ಅವರನ್ನು ಸಂಧಿಸಲು ಕುವೆಂಪು ನಿಯಮಿತವಾಗಿದ್ದರು. ರಾಜಕುಮಾರನಿಗೆ ಕನ್ನಡದಲ್ಲಿ ಅಷ್ಟೇನೂ ಆಸಕ್ತಿಯಿರಲಿಲ್ಲ. ಅವರಿಗೆ ಅರಮನೆಯಲ್ಲಿ ಪ್ರೈವೆಟ್ ಟ್ಯೂಷನ್ ಹೇಳಲು ಆಹ್ವಾನ ಬಂದಾಗ ಕುವೆಂಪು ಅವರು 'I have got better business than teaching princes!' ಎಂದು ಹೇಳಿದ್ದರು.

ಕುವೆಂಪು ಅವರು ಉಪನ್ಯಾಸಕರಾಗಿದ್ದಾಗ ಸದಾ ಹೊಸ ಹೊಸ ಪುಸ್ತಕಗಳ ಅಧ್ಯಯನದಲ್ಲಿ ಸದಾ ನಿರತರಾಗಿರುತ್ತಿದ್ದರು. ಹಾಗೆ ಓದಿದ ಪುಸ್ತಕಗಳು: Galsworthyಯ A Farsyte Saga, A. C. Bradleyಯ Oxford Lectures on poetry, Carriotರ What is Beauty, Lessingರ Laokon, CEM. Joad ಬರೆದ the philosophy of Radhakrishna, Elizabeth Drewರ Discovering Poetry. Eddingtonರ The Nature of the physical World, Paul Brunton ಬರೆದ A Search in Secret India, Leon Troksky ಯ History of the Russian Revolution ಮುಂತಾದವುಗಳು. ಇದು ಪ್ರಾಧ್ಯಾಪಕರಾದವರಿಗೆ ಮಾರ್ಗದರ್ಶಿ ಅಧ್ಯಯನ ರೀತಿಯಾಗಿದೆ.



## ಯುವಕರು ನಿರಂಕುಶಮತಿಗಳಾಗಬೇಕು

ಬಿ.ಎಂ. ಶ್ರೀಯವರೊಡನೆ ಕುವೆಂಪು ಅವರು ಶ್ರೀರಂಗಪಟ್ಟಣದ ಯುವಜನ ಸಮ್ಮೇಳನಕ್ಕೆ 13–1–1935ರಂದು ಹೋಗಿದ್ದರು. ಶ್ರೀಯವರು ಮತ, ಭಾಷೆ, ಜಾತಿಯ ತೊಡಕುಗಳ ವಿಚಾರವಾಗಿ ಮಾತನಾಡಿದರು. ಅನಂತರ ಕುವೆಂಪು 'ಯುವಕರು ನಿರಂಕುಶ ಮತಿಗಳಾಗಬೇಕು' ಎಂದು ಭಾಷಣ ಮಾಡಿದರು.

ಪತ್ರಿಕೆಗಳಲ್ಲಿ ವರದಿಯಾದ ಕುವೆಂಪು ಅವರ ಆ ಭಾಷಣವನ್ನು ಓದಿ ಸಂಪ್ರದಾಯದ ಮೂಢಮತಿಗಳಾದ ಹಾರುವರಿಗೆ ತಲೆಕೆಟ್ಟಂತಾಯಿತು. ಪತ್ರಿಕೆಗಳಲ್ಲಿ ನಾನಾ ವಿಧವಾದ ವಾದ ಟೀಕೆ ಟಿಪ್ಪಣಿ ಖಂಡನೆಗಳು ಬಂದವು. ಬ್ರಾಹ್ಮಣರ ಅಗ್ರವ್ಯಕ್ತಿ ದೇವುಡು ನರಸಿಂಹ ಶಾಸ್ತ್ರಿಗಳು ದೀರ್ಘ ಲೇಖನ ಬರೆದು ಕುವೆಂಪು ಅವರನ್ನು ಖಂಡಿಸಿದರು.

ಸರಕಾರ ಪತ್ರಿಕೆಯಲ್ಲಿ ಪ್ರಕಟವಾದ ಉಗ್ರ ಟೀಕೆಗಳನ್ನು ಗಮನಿಸಿ ವಿಶ್ವವಿದ್ಯಾನಿಲಯಕ್ಕೆ ತನಿಖೆ ಮಾಡಿ ವರದಿ ಕಳಿಸಲು ಕೇಳಿತು. ವಿಚಾರಣೆ ಕರ್ತವ್ಯ ಪ್ರೊ॥ ವೆಂಕಣ್ಣಯ್ಯನವರ ಮೇಲೆ ಬಿತ್ತು. ಅವರಿಗೆ ಅಚ್ಚಾಗಿದ್ದ ಆ ಭಾಷಣದ ಪ್ರತಿ ಕುವೆಂಪು ನೀಡಿದರು. ಅನಂತರ ಅವರು ವಿಶ್ವವಿದ್ಯಾನಿಲಯಕ್ಕೆ ಬರೆದ ಕಾಗದದಲ್ಲಿ 'ನಾನು ನನ್ನ ಮಗನಿಗೆ ಬುದ್ಧಿ ಹೇಳಬೇಕಾಗಿ ಬಂದರೆ ಇದಕ್ಕಿಂತಲೂ ವಿಚಾರ ಪೂರ್ವಕವಾಗಿ ಸೊಗಸಾಗಿ ಸಮರ್ಥವಾಗಿ ಬರೆಯಲಾರೆ'[5] ಎಂದು ಬರೆದಿದ್ದರಂತೆ.

ಅವರೊಬ್ಬ ವೈಜ್ಞಾನಿಕ ಮನೋಧರ್ಮ ವೇದಾಂತ ಮಾರ್ಗದ, ದಿಟ್ಟ ವೈಚಾರಿಕ ವ್ಯಕ್ತಿಯಾಗಿದ್ದರು. ಅವರು 1944ರಲ್ಲಿ 'ಆತ್ಮ ಶ್ರೀಗಾಗಿ ನಿರಂಕುಶ ಮತಿಗಳಾಗಿ'–ಭಾಷಣಗಳ ಸಂಕಲನ ಪ್ರಕಟಪಡಿಸಿದರು. ಕಾವ್ಯ ಸಾಹಿತ್ಯದ ಸತ್ಯಾನ್ವೇಷಕ ವಿಮರ್ಶಕರಾಗಿದ್ದ ಅವರು 'ತಪೋನಂದನ', 'ವಿಭೂತಿ ಪೂಜೆ',

---

5. ನೆ.ದೋ. ಪು 1074

'ದ್ರೌಪದಿಯ ಶ್ರೀಮುಡಿ' 'ರಸೋವೈಸಃ' ಸಾಹಿತ್ಯ ವಿಮರ್ಶೆ ಮತ್ತು ಕಾವ್ಯ ಮೀಮಾಂಸೆಯ ಕೃತಿಗಳನ್ನು ರಚಿಸಿದರು.

## ಹುಲಿಬೇಟೆ

1935ರ ಬೇಸಿಗೆ ರಜೆಯಲ್ಲಿ ಕುವೆಂಪು ಅವರು ಇಂಗ್ಲಾದಿಯಲ್ಲಿದ್ದಾಗ ರಜೆಗೆ ಬಂದಿದ್ದ ಹುಡುಗರು ಮತ್ತು ಅತಿಥಿಗಳಾಗಿ ಆಗಮಿಸಿದ್ದ ಬಯಲು ಸೀಮೆಯ ಮಿತ್ರರೊಡನೆ ದೊಡ್ಡ ಬೇಟೆಗೆ ಹೋಗಿ ಪ್ರೇಕ್ಷಕರಾಗಿ ಭಾಗಿಗಳಾಗಿದ್ದರು. ಒಂದು ಸಂಜೆ ಮರಸು ಕೂರಲು ಹೋಗಿದ್ದಾಗ ಹಿರಿಯಣ್ಣ ಭೀಷಣ ಸೌಂದರ್ಯದ ಹುಲಿರಾಯನನ್ನು ಬೇಟೆ ಆಡಿದ್ದ. ಅದನ್ನು ಕಾರಿನಲ್ಲಿ ಹಾಕಿಕೊಂಡು ಇಂಗ್ಲಾದಿಗೆ ಬಂದರು. ಅದರ ಚರ್ಮ ಸುಲಿಸಿ ಪ್ಯಾಕ್ ಮಾಡಿದರು. ತಲೆ ಸಹಿತ ಕಟ್ಟಿಸಿ ಹದ ಹಾಕಿಸಲು ಮೈಸೂರಿಗೆ ಕಳುಹಿಸಿದರು. ಅನಂತರ ಒಂದು ವರ್ಷಕ್ಕೆ ಅದು ಇಂಗ್ಲಾದಿಗೆ ಬಂದಿತು. ಆ ಹುಲಿ ನಿಂತಂತೆ ತೋರುತ್ತಿತ್ತು. ತೆರೆದ ಬಾಯಿಯಲ್ಲಿ ಕೆನ್ನಾಲಿಗೆ ಮತ್ತು ಹಲ್ಲುಗಳು ಅತ್ಯಂತ ಸಹಜವಾಗಿ ಹೆದರಿಕೆ ಹುಟ್ಟಿಸುವಂತೆ ಇದ್ದವು. ಅದನ್ನು ಕುವೆಂಪು ಮೈಸೂರಿನ ತಮ್ಮ ಮನೆಯಲ್ಲಿಟ್ಟುಕೊಂಡಿದ್ದರು.

1935ರ ಬೇಸಿಗೆ ರಜಕಾಲದ ಮೇ ತಿಂಗಳಿನಲ್ಲಿ ಮೈಸೂರು ವಿಶ್ವ-ವಿದ್ಯಾನಿಲಯದವರು ಚಿಕ್ಕಮಗಳೂರಿನಲ್ಲಿ ಒಂದು ಉಪನ್ಯಾಸ ಸಪ್ತಾಹ ಏರ್ಪಡಿಸಿದ್ದರು. ಅದರಲ್ಲಿ ಪ್ರೊ॥ ವೆಂಕಣ್ಣಯ್ಯ, ನಾ.ಕಸ್ತೂರಿ, ತೀ.ನಂ.ಶ್ರೀಕಂಠಯ್ಯ, ಜಿ. ಹನುಮಂತರಾಯ ಭಾಗವಹಿಸಿದ್ದರು. ಕುವೆಂಪು 'ಹರಿಶ್ಚಂದ್ರ ಕಾವ್ಯ' ಕುರಿತು ಭಾಷಣ ಮಾಡಿದರು. ಅಂದಿನ ಸಭೆಗೆ ಸರ್ ಕೆ. ಪಿ. ಪುಟ್ಟಶೆಟ್ಟರು, ಚಿಕ್ಕಮಗಳೂರು ಜಿಲ್ಲೆಯ ಡೆಪ್ಯುಟಿ ಕಮಿಷನರ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಬಂದಿದ್ದರು.

## 'ಕವಿಶೈಲ'ದಲ್ಲಿ ಕವಿಗಳ ಸ್ವಅಕ್ಷರ ಕೆತ್ತನೆ

ಮೈಸೂರಿನ ಮಿತ್ರರನ್ನು ಕುವೆಂಪು ತಮ್ಮ ಊರಿಗೆ ಕರೆದುಕೊಂಡು ಹೋದರು. ಅವರೆಲ್ಲ ಮೊದಲು ಇಂಗ್ಲಾದಿಯಲ್ಲಿ ಉಳಿದುಕೊಂಡರು. 'ಮಲೆನಾಡು ಒಕ್ಕಲಿಗ ಯುವಕರ ಸಂಘ' ವಾರ್ಷಿಕೋತ್ಸವ 'ಹುಗಲವಳ್ಳಿ'ಯಲ್ಲಿತ್ತು. ಅಲ್ಲಿಗೆ ನಾಲ್ವರು



ವಿದ್ವಾಂಸರನ್ನು ಕರೆದುಕೊಂಡು ಹೋದರು. ಮಲೆನಾಡಿಗರಿಗೆ ಅವರ ಭಾಷಣಗಳನ್ನು ಆಲಿಸುವ ಸೌಭಾಗ್ಯ ಒದಗಿತು.

ಆ ಬಯಲು ಸೀಮೆಯ ಅತಿಥಿಗಳನ್ನು ಮಾರನೇ ದಿನ ಸೂರ್ಯೋದಯಕ್ಕೆ ಮುನ್ನ 'ನವಿಲುಕಲ್ಲು' ಗುಡ್ಡಕ್ಕೆ ಕರೆದೊಯ್ದರು. ಪ್ರೊ॥ ವೆಂಕಣ್ಣಯ್ಯನವರು ಆ ಬೆಳಗಿನ ಸೌಂದರ್ಯಾನುಭೂತಿಯಲ್ಲಿ ಧ್ಯಾನಲೀನರಾಗಿ ಸಮಾಧಿ ಸ್ಥಿತಿಯಲ್ಲಿದ್ದರು.

ನವಿಲು ಕಲ್ಲಿನಿಂದ ಇಂಗ್ಲಾದಿಗೆ ಹಿಂದಿರುಗಿದರು. ಅನಂತರ ಪ್ರೊ॥ ವೆಂಕಣ್ಣಯ್ಯ ಮತ್ತು ಇತರ ಸ್ನೇಹಿತರನ್ನು ಕುವೆಂಪು ಅವರು ತಮ್ಮ 'ಕಾಡು ಮುತ್ತು ಕೊಡುತಲಿರುವ ಸೊಬಗು ವೀಡು ನನ್ನ ಮನೆ' ಯಾದ ಕುಪ್ಪಳಿಗೆ ಕರೆದುಕೊಂಡು ಹೋದರು. ಮನೆ ಕೆರೆಗದ್ದೆ ತೋಟಗಳನ್ನೆಲ್ಲ ವೀಕ್ಷಿಸಿದ ಮೇಲೆ ಅವರನ್ನೆಲ್ಲ 'ಕವಿಶೈಲ'ಕ್ಕೆ ಕರೆದೊಯ್ದರು. ಅವರೆಲ್ಲರು 'ತೆರೆಮೇಲೆ ತೆರೆಯೆದ್ದು ಹರಿಯುತಿದೆ ಗಿರಿಪಂಕ್ತಿ ಕಣ್ಣಟ್ಟಿ ಹೋಹನ್ನೆಗಂ' ಎಂಬ ವರ್ಣನೆಯ ಆ ಸಹ್ಯಾದ್ರಿಯ ಸುಂದರ ನೆಲೆಯನ್ನು ನೋಡಿ ತಣಿದರು. 'ವೆಂಕಣ್ಣಯ್ಯನವರಾದಿಯಾಗಿ ಎಲ್ಲರೂ ತಮ್ಮ ತಮ್ಮ ಹೆಸರುಗಳ ಪ್ರಥಮಾಕ್ಷರಗಳನ್ನು ಬಂಡೆಯ ಗೋಡೆಯ ಮೇಲೆ ಕಲ್ಲಿನ ತುಂಡುಗಳಿಂದ ಬಡಿದು ಕೆತ್ತಿದರು!' [ಅಲ್ಲಿಗೆ ಕಾವ್ಯಯಾತ್ರೆ ಕೈಗೊಳ್ಳುವ ಸಹೃದಯರೆಲ್ಲರೂ ಅದನ್ನು ನೋಡಿ ಆನಂದಿಸುವರು. ಅದರ ಜೊತೆಗೆ ಫೋಟೊ ಕ್ಲಿಕ್ಕಿಸಿಕೊಳ್ಳುವರು].

'ಕವಿಶೈಲ'ದಿಂದ ಅವರೆಲ್ಲರನ್ನೂ ಅದಕ್ಕಿಂತಲೂ ತುಂಗತರವಾಗಿದ್ದ 'ಸಂಜೆಗಿರಿ' ಶಿಖರಕ್ಕೆ ಕರೆದುಕೊಂಡು ಹೋದರು. ಆ ರಮಣೀಯತೆಯನ್ನು ಅವರೆಲ್ಲ ಸವಿದು ಸುಖಿಸಿದರು.

* * *

1936ರ ಮೇ ತಿಂಗಳಲ್ಲಿ ದುಗ್ಗಪ್ಪ ಹೆಗ್ಗಡೆ ಆಹ್ವಾನದಂತೆ ಕುವೆಂಪು ಅವರು ಜೈನರ ಕ್ಷೇತ್ರ ಕುಂದದ ಗುಡ್ಡಕ್ಕೆ ಹೋದರು. ಕುಂದದ ಗುಡ್ಡದ ನೆತ್ತಿ ಆ

ಶ್ರೇಣಿಯಲ್ಲಿಯೆ ಅತ್ಯಂತ ಉನ್ನತ ಶಿಖರ. ಅದರ ಅನುಭವದ ಚಿತ್ರಣ ಮಲೆನಾಡಿನ ಚಿತ್ರಗಳು, ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು, ಶ್ರೀರಾಮಾಯಣ ದರ್ಶನಂ ನಲ್ಲಿದೆ. ಅನಂತರ ಅವರು ಕೌಲೆದುರ್ಗ, ಅಲ್ಲಿಯ ಅರಮನೆಯ ಅವಶೇಷಗಳನ್ನು ನೋಡಿದರು. ಕೌಲೆದುರ್ಗದ ಅತ್ಯುನ್ನತ ಶೃಂಗಸ್ಥಾನ ಶಿಖರೇಶ್ವರ. ಅಲ್ಲಿಂದ ಆಗುಂಬೆಗೆ ಹೋಗಿ ಸೂರ್ಯಾಸ್ತ ನೋಡಿದರು. 1936ರಲ್ಲಿ ಅವರ 'ನನ್ನ ದೇವರು ಮತ್ತು ಇತರ ಕಥೆಗಳು' ಕಥಾಸಂಕಲನ ಪ್ರಕಟವಾಯಿತು. ಅವರು 1930ರಲ್ಲಿ 'ನರಿಗಳಿಗೇಕೆ ಕೋಡಿಲ್ಲ' ಮಕ್ಕಳ ಕಥೆ ಪ್ರಕಟಿಸಿದ್ದರು.

### 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ

ಕುವೆಂಪು ಅವರು 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ ರಚನೆಯನ್ನು ಜನವರಿ 1936ರಲ್ಲಿ ಪ್ರಾರಂಭಿಸಿದರು. ಸತತ 9 ವರ್ಷಗಳ ಕಾಲ ಶ್ರೀರಾಮ ಕಥಾ ಧ್ಯಾನಶೀಲರಾಗಿ ತಪಸ್ವಿಯಂತೆ 'ಶ್ರೀರಾಮಾಯಣ ದರ್ಶನಂ' ಮಹಾಕೃತಿಯನ್ನು 1945ರಲ್ಲಿ ಪೂರ್ಣಗೊಳಿಸಿದರು. 1949ರಲ್ಲಿ ಅದರ ಮೊದಲ ಮಹಾಸಂಪುಟ ಪ್ರಕಟಣೆಯಾಗಿ, 1951ರಲ್ಲಿ ಎರಡನೇ ಸಂಪುಟ ಪ್ರಕಟವಾಗಿ ಜನಮನದ ಆರಾಧ್ಯ ಕಾವ್ಯವಾಯಿತು. ಅದಕ್ಕೆ 1955ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿತು.

ಆ ಮಹಾಕಾವ್ಯವನ್ನು ಕುವೆಂಪು ಅವರು ವಿಶ್ವವಾಣಿಗೆ ಮುಡಿಯ ಮಣಿಯಾಗಿಸಿ ಅದರ ಆಂತರ್ಯದ ಸತ್ಯಕಥನವನ್ನು ಹೀಗೆ ಸ್ಪಷ್ಟಪಡಿಸಿದ್ದಾರೆ.

ಬಹಿರ್ಘಟನೆಯಂ ಪ್ರತಿಕೃತಿಸುವಾ ಲೌಕಿಕ<br>
ಚರಿತ್ರೆಯಲ್ತಿದು, ಅಲೌಕಿಕ ನಿತ್ಯ ಸತ್ಯಂಗಳಂ<br>
ಪ್ರತಿಮಿಸುವ ಸತ್ಯಸ್ಯ ಸತ್ಯ ಕಥನಂ ಕಣಾ,<br>
ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ<br>
ಮೇರು ಕೃತಿ, ಮೇಣ್ ಜಗದ್ಭವ್ಯರಾಮಾಯಣಂ!

**(ಶ್ರೀ ವೆಂಕಣ್ಣಯ್ಯನವರಿಗೆ, ಸಾಲು 23–27)**



'ಶ್ರೀರಾಮಾಯಣದರ್ಶನಂ' ಮಹಾಕಾವ್ಯವನ್ನು ಕುರಿತು ಗೋವಿಂದ ಪೈ ಅವರು ಹೀಗೆ ಹೇಳಿದ್ದಾರೆ: 'ಹಳೆಯ ಕಥೆ, ಹೊಸ ಯುಗಧರ್ಮವನ್ನು ಮೈಗೂಡಿಸಿಕೊಂಡು, ಎಷ್ಟರ ಮಟ್ಟಿಗೆ ಹೊಸದಾಗಬಹುದು ಎಂಬುದಕ್ಕೆ ಈ ಮಹಾಕಾವ್ಯ ಉಜ್ವಲ ಉದಾಹರಣೆ. ಮಿಲ್ಟನ್ ಕವಿಯ 'ಪ್ಯಾರಡೈಸ್ ಲಾಸ್ಟ್', 'ಪ್ಯಾರಡೈಸ್ ರೀಗೇನ್ಡ್' ಆದ ಮೇಲೆ ಯಾವ ಭಾಷೆಯಲ್ಲೇ ಆಗಲಿ ಈ ಪ್ರಮಾಣದ ಒಂದು ಮಹಾಕಾವ್ಯ ಬಂದದನ್ನು ಕಾಣೆ.

**ಕುಪ್ಪಳಿಯಲ್ಲಿ ಸ್ವಾಮಿ ಸಿದ್ದೇಶ್ವರಾನಂದಜಿ ಮತ್ತು ಬಿ. ಎಂ. ಶ್ರೀ**

1936ರ ಮೇ ನಲ್ಲಿ ಇಂಗ್ಲಾದಿಯಲ್ಲಿ ನಡೆಯುವ 'ಮಲೆನಾಡು ಒಕ್ಕಲಿಗ ಯುವಕರ ಸಂಘ'ದ ವಾರ್ಷಿಕೋತ್ಸವದ ಅಧ್ಯಕ್ಷತೆ ವಹಿಸಲು ಬಿ.ಎಂ.ಶ್ರೀಯವರನ್ನು ಕುವೆಂಪು ಕೇಳಿಕೊಂಡರು. ಅವರು ತಮ್ಮ ವಯಸ್ಸು ಆಯಾಸ ಲೆಕ್ಕಿಸದೆ ಬಂದರು. ಆ ವರ್ಷ ಶ್ರೀರಾಮಕೃಷ್ಣರ ಶತಮಾನೋತ್ಸವವನ್ನು ಕುಪ್ಪಳಿಯಲ್ಲಿ ಆಚರಿಸಲು ಕುವೆಂಪು ನಿರ್ಧರಿಸಿ ಸ್ವಾಮಿ ಸಿದ್ದೇಶ್ವರಾನಂದರನ್ನು ಆಹ್ವಾನಿಸಿದರು. ಅವರು ಒಪ್ಪಿ ಬಂದರು. ಇಂಗ್ಲಾದಿಯಲ್ಲಿ ರಾತ್ರಿ ತಂಗಿದ್ದರು. ಬೆಳಿಗ್ಗೆ ಬೇಗನೆ ನವಿಲು ಕಲ್ಲಿಗೆ ಹೋಗಿ ಸೂರ್ಯೋದಯ ನೋಡುವ ವಿಷಯ ತಿಳಿಸಲು ಬಿ.ಎಂ.ಶ್ರೀ ಹೃತ್ಪೂರ್ವಕವಾಗಿ ಬೆಂಬಲಿಸಿದರು. ಬಿ.ಎಂ.ಶ್ರೀ, ಸ್ವಾಮೀಜಿ, ಕೃಷ್ಣರಾಯರು ಬೆಳಗಿನ ಜಾವದಲ್ಲಿ ನವಿಲುಕಲ್ಲು ಗುಡ್ಡಕ್ಕೆ ಹೋದರು. ಆ ಉಷೋದಯ ಅರುಣೋದಯ ಸೂರ್ಯೋದಯಗಳ ಸ್ವರ್ಗೀಯ ಸೌಂದರ್ಯಾರಾಧನೆ ಸವಿದರು.

ಇಂಗ್ಲಾದಿಯಿಂದ ಸಂಜೆ ಕುಪ್ಪಳಿಗೆ ಹೋದರು. ಕುವೆಂಪು ಅವರನ್ನೆಲ್ಲ 'ಕವಿಶೈಲ'ಕ್ಕೆ ಕರೆದೊಯ್ದರು. ಅದು ಅವರ ಮನೆಯ ಹಿಂದಿರುವ ಗುಡ್ಡ. ಹೋಗುವ ಹಾದಿ 'ದಿಬ್ಬಣಗಲ್ಲು.' ಅಲ್ಲಿಯೇ ಆಳೆತ್ತರಕ್ಕೆ ನಿಂತಿರುವ ಮನುಷ್ಯಾಕಾರದ ಕಲ್ಲಿದೆ. ಅದನ್ನು ಕವಿ 'ಶಿಲಾತಪಸ್ವಿ' ಎಂದು ಕರೆದಿದ್ದಾರೆ. ದಿಬ್ಬಣದಂತೆ ಹೊರಟ ಅತಿಥಿಗಳಿಗೆ ಕುವೆಂಪು ಅದನ್ನೆಲ್ಲ ವಿವರಿಸಿದರು.





ದೃಷ್ಟಿ ದಿಗಂತದ ಮೇರೆಯ ದಾಟಿ
ಗಗನದ ಮೇಘವಿತಾನವ ಮೀಟಿ
ದೂರಕೆ ದೂರಕೆ ಸುದೂರ ದೂರಕೆ
ಹಬ್ಬಿದೆ ಪರ್ವತ ದಿಗಂತ ಶೈಲಿ ಮೈಲಿ ಮೈಲಿ,
**(ಕವಿಶೈಲದಲ್ಲಿ ಸಂಜೆ)**

ಕವಿವರ್ಣನೆಯ ಆ ಸುಂದರ ಶೋಭೆ ದೃಷ್ಟಿಸಿ ಆನಂದಿಸಿದರು. 'ಕವಿಶೈಲದ ಅರೆ ಬಂಡೆಯ ಮೇಲೆ ಬಿ.ಎಂ.ಶ್ರೀ ಆದಿಯಾಗಿ ಎಲ್ಲರೂ ತಂತಮ್ಮ ಹೆಸರಿನ ಪ್ರಥಮಾಕ್ಷರಗಳನ್ನು ಕಲ್ಲುಗಳಿಂದ ಹೊಡೆದು ಕೆತ್ತಿದರು.'[6] ಅಲ್ಲಿ 'ಸಂಜೆಗಿರಿ'ಗೆ ಹೋಗಿ ಮನೋಹರ ದೃಶ್ಯದ ಮಹೋನ್ನತಿ ಕಂಡು ಹರ್ಷಗೊಂಡರು. ಬಿ.ಎಂ.ಶ್ರೀ. ಯವರು ತೀರ್ಥಹಳ್ಳಿಯ ಭಾಷಣ ಕಾರ್ಯಕ್ರಮದ ನಂತರ ಆಗುಂಬೆಗೆ ಹೋದರು.

ಮೇ 1936ರಲ್ಲಿ ಶ್ರೀ ರಾಮಕೃಷ್ಣ ಶತಮಾನೋತ್ಸವ ಆಚರಣೆ ಕುಪ್ಪಳಿಯಲ್ಲಿ. ಉಪ್ಪರಿಗೆಯಲ್ಲಿ ಶ್ರೀರಾಮಕೃಷ್ಣ. ಸ್ವಾಮಿ ವಿವೇಕಾನಂದ – ಶ್ರೀ ಮಹಾಮಾತೆ ಶಾರದಾದೇವಿಯವರ ದೊಡ್ಡ ಭಾವ ಚಿತ್ರಗಳನ್ನಿಟ್ಟು ವೇದಿಕೆ ನಿರ್ಮಿಸಿದರು. ಬಗನಿ, ಬಾಳೆ, ಹಲಸು, ಮಾವು ಇತ್ಯಾದಿ ಹಸುರು ಎಲೆಗಳಿಂದ ಅಲಂಕರಿಸಿ, ಪುಟ್ಟ ಅರಣ್ಯವನ್ನಾಗಿ ಮಾಡಿದರು. ಶ್ರೀಮತ್ ಸ್ವಾಮಿ ಸಿದ್ದೇಶ್ವರಾನಂದರ ಪಾವನ ನೇತೃತ್ವದಲ್ಲಿ ಆ ದಿನದ ಪೂಜಾದಿಗಳೆಲ್ಲ ಅವರ ದಿವ್ಯ ಹಸ್ತದಿಂದಲೇ ನಡೆಯಿತು. ಕುಪ್ಪಳಿಯ ರಾಜಮ್ಮ, ಸಾವಿತ್ರಮ್ಮ ಮಹಿಳೆಯರು ಮತ್ತು ಮಕ್ಕಳು, ದೇವಂಗಿ ಉಂಟೂರು ಇಂಗ್ಲಾದಿ ಅಲಿಗೆಯ ನೆಂಟರು ಮಿತ್ರರು ಬಂದು ನೆರೆದು ಒಂದಾಗಿ ಹಬ್ಬದ ಸಂಭ್ರಮದಂತೆ ಶ್ರೀರಾಮಕೃಷ್ಣ ಶತಮಾನೋತ್ಸವ ಆಚರಿಸಿದರು. ಸ್ವಾಮೀಜಿಗಳು ಅವರೊಡನೆ ಒಂದಾಗಿ ಆತ್ಮೀಯವಾಗಿ ಬೆರೆತು ಆನಂದದ ಚಿಂತನೆಗಳನ್ನು ಉಣಬಡಿಸಿದರು.

---

6.ನೆ. ದೋ. ಪು 1104



## ವಿವಾಹ

ಕುವೆಂಪು ಅವರು ಮೈಸೂರು ಪುರಸಭೆಯವರು ಒಂಟಿಕೊಪ್ಪಲಿನ ಪಶ್ಚಿಮ ದಿಕ್ಕಿನಲ್ಲಿ ಮಾಡಿದ್ದ ಸೈಟನ್ನು ಕೊಂಡರು. 1936ರ ಆಗಸ್ಟ್ ತಿಂಗಳಲ್ಲಿ ಆಶ್ರಮ ಬಿಟ್ಟು ವಾಣಿವಿಲಾಸಪುರದಲ್ಲಿ ಒಂದು ಬಾಡಿಗೆ ಮನೆಯಲ್ಲಿದ್ದರು. ಕಂಟ್ರಾಕ್ಟರಿಂದ ಮನೆ ಕಟ್ಟಿಸಿದರು. ಭಾವಲಹರಿಗೆ ತಕ್ಕಂತೆ ಕವನಗಳನ್ನು ರಚಿಸುತ್ತಿದ್ದರು. ಅವುಗಳಲ್ಲಿ 'ದೇವರು ರುಜು ಮಾಡಿದನು', 'ಬಾ ಪಾಲ್ಗುಣ ರವಿದರ್ಶನಕೆ' ಮುಂತಾದವುಗಳಿದ್ದವು.

ಕುವೆಂಪು ಅವರ ವಿವಾಹವು ದೇವಂಗಿ ರಾಮಣ್ಣಗೌಡರ ಮಗಳು ಹೇಮಾವತಿಯೊಡನೆ 1-5-1937ರಂದು ಇಂಗ್ಲಾದಿಯಲ್ಲಿ ನಡೆಯಿತು. ಅವರು ಕಟ್ಟಿಸಿದ ಮನೆಗೆ 'ಉದಯರವಿ' ಎಂದು ಹೆಸರಿಟ್ಟು ಸಂಸಾರ ಹೂಡಿದರು. ಅನಂತರ ಅವರು ಬರೆದ ಪ್ರೇಮಕವನಗಳು: ಷೋಡಶಿ, ಪ್ರೇಮಕಾಶ್ಮೀರ, ಜೇನಾಗುವಾ, ಚಂದ್ರಮಂಚಕೆ ಬಾ ಚಕೋರಿ, ಅನುತ್ತರಾ ಮುಂತಾದವುಗಳು. ಅದೇ ವರ್ಷ 'ಕಥನ ಕವನಗಳು' ಪ್ರಕಟವಾಯಿತು. ಅದರಲ್ಲಿ 11 ಕಥನಗಳು ಕವನ ರೂಪದಲ್ಲಿವೆ. ಅವರ ದಾಂಪತ್ಯದ ಫಲ ಎರಡು ಗಂಡು ಮಕ್ಕಳು: ಪೂರ್ಣಚಂದ್ರ ತೇಜಸ್ವಿ, ಕೋಕಿಲೋದಯ ಚೈತ್ರ; ಎರಡು ಹೆಣ್ಣು ಮಕ್ಕಳು: ಇಂದುಕಲಾ, ತಾರಿಣಿ.

## ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರು

ಅವರಿಗೆ 1939ರಲ್ಲಿ ರೀಡರ್ ಆಗಿ ಸೆಂಟ್ರಲ್ ಕಾಲೇಜಿನಲ್ಲಿ ನೇಮಕವಾಯಿತು. ಅವರು ಆಗ ಬೆಂಗಳೂರಿನಲ್ಲಿ ವಾಸಿಸುತ್ತಿದ್ದರು. 1946ರಲ್ಲಿ ಪ್ರಾಧ್ಯಾಪಕ ಮತ್ತು ಕನ್ನಡ ವಿಭಾಗ ಮುಖ್ಯಸ್ಥರಾಗಿ ಮಹಾರಾಜ ಕಾಲೇಜಿನಲ್ಲಿ ನೇಮಕವಾದರು. ಅನಂತರ ಮೈಸೂರಿನಲ್ಲಿಯೇ ನೆಲೆಸಿದರು. 1955ರಲ್ಲಿ ಮಹಾರಾಜ ಕಾಲೇಜಿನ ಪ್ರಿನ್ಸಿಪಾಲರಾದರು. ಅವರು ಉತ್ತಮ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ಕ್ಷೇಮಾಭಿವೃದ್ಧಿಗೆ ಶ್ರಮಿಸಿದರು. ಅವರು ವಿದ್ಯಾರ್ಥಿಗಳನ್ನುದ್ದೇಶಿಸಿ ಹೇಳಿರುವ ಈ

ಕೆಳಗಿನ ನುಡಿಗಳನ್ನು ಪ್ರತಿಯೊಬ್ಬ ವಿದ್ಯಾರ್ಥಿಯು ಮನನ ಮಾಡಿ, ಸಾರ್ಥಕ ವ್ಯಕ್ತಿಯಾಗಿ ರೂಪುಗೊಳ್ಳಬೇಕು.

- ವಿದ್ಯಾರ್ಥಿಗಳು ಭತ್ತದ ಚೀಲಗಳಾಗಬಾರದು, ಭತ್ತದ ಗದ್ದೆಗಳಾಗಬೇಕು.
- ನಮ್ಮ ಉತ್ಸಾಹ ಹುಲ್ಲಿನ ಬೆಂಕಿಯಾಗಬಾರದು, ಕಲ್ಲಿದ್ದಲ ಕಾವಾಗಬೇಕು.
- ವಿದ್ಯಾರ್ಥಿಯ ಜೀವನವೂ ಒಂದು ತಪಸ್ಸಾಧನೆ.
- ಪ್ರತಿಯೊಬ್ಬ ದಿಟವಾದ ವಿದ್ಯಾರ್ಥಿಯು ಒಬ್ಬ ಗೌರವ ತಪಸ್ವಿ.
- ಶುದ್ಧಿರ್ಮೇಣ್ ಶ್ರದ್ಧೆಯಿರೆ ತುದಿಗೆ ತಪ್ಪದು ಸಿದ್ಧಿ ಸಾಧನೆಗೆ.

* * *



# ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ

ಕುವೆಂಪು ಅವರು 1956ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದರು. ಅದು ಮೈಸೂರು ವಿಶ್ವವಿದ್ಯಾನಿಲಯದ ಪದವೀಧರ ಮತ್ತು ಕನ್ನಡ ಪ್ರಾಧ್ಯಾಪಕರಾಗಿದ್ದವರು ಮೊಟ್ಟಮೊದಲಿಗೆ ಉಪ ಕುಲಪತಿಗಳಾದ ಚರಿತ್ರಾಹ ಘಟನೆಯಾಗಿತ್ತು. ಅವರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಾರಂಭಗಳಲ್ಲಿ ಕನ್ನಡದಲ್ಲಿಯೇ ಮಾತನಾಡುತ್ತಿದ್ದರು. ಅವರು ಅಧಿಕಾರವಹಿಸಿಕೊಂಡ ತಿಂಗಳಲ್ಲಿ ಮೈಸೂರಿನ ಕ್ರಾಪರ್ಡ್ ಭವನದಲ್ಲಿ ಪ್ರಪಂಚ ವಿಶ್ವವಿದ್ಯಾನಿಲಯ ಸೇವಾಗೋಷ್ಠಿ ನಡೆಯಿತು. ಅದರ ಪ್ರಾರಂಭೋತ್ಸವ ಸಮಯದಲ್ಲಿ ಅವರು ಕನ್ನಡದಲ್ಲಿಯೇ ಸ್ವಾಗತ ಭಾಷಣ ಮಾಡಿದರು.

ಕುವೆಂಪು ಅವರ ಕಾಲದಲ್ಲಿ ವಿಶ್ವವಿದ್ಯಾನಿಲಯ ಸ್ವಾಯತ್ತ ಸಂಸ್ಥೆಯಾಯಿತು. ಅದೇ ಸಮಯದಲ್ಲಿ ಕೇಂದ್ರ ಶಿಕ್ಷಣ ಸಚಿವಾಲಯದಲ್ಲಿ ಹೊಸದೊಂದು ಯೋಜನೆ ಸಿದ್ಧವಾಯಿತು. ಆ ಯೋಜನೆಯ ಪ್ರಕಾರ ಪ್ರಾಥಮಿಕ ವಿದ್ಯಾಭ್ಯಾಸದ ಅವಧಿ ಏಳು ವರ್ಷಗಳಿರಬೇಕೆಂದೂ, ಆನಂತರ ಒಂದು ವರ್ಷದ ಪೂರ್ವಭಾವಿ ವಿಶ್ವವಿದ್ಯಾನಿಲಯದ ಶಿಕ್ಷಣ ಏರ್ಪಾಡಬೇಕೆಂದೂ, ಪ್ರಥಮ ಪದವಿಯ ಮೂರು ವರ್ಷಗಳಾಗಿರಬೇಕೆಂದೂ, ಎಂ.ಎ ಪದವಿಯ ಅವಧಿ ಎರಡು ವರ್ಷಗಳೆಂದಾಗಿತ್ತು. ಆ ಹೊಸ ಯೋಜನೆಯನ್ನು ಕಾರ್ಯರೂಪಕ್ಕೆ ತರುವ ವಿಶ್ವವಿದ್ಯಾಲನಿಲಯಕ್ಕೆ ನಾನಾ ರೀತಿಯ ಸಹಾಯ ದ್ರವ್ಯ ಒದಗಿಸುವುದಾಗಿಯೂ ಸಚಿವಾಲಯ ಪ್ರಕಟಿಸಿತ್ತು. ಆ ಹೊಸ ಯೋಜನೆಯನ್ನು ಜಾರಿಗೆ ತರುವ ಜವಾಬ್ದಾರಿಯೂ ಕುವೆಂಪು ಅವರ ಪಾಲಿಗೆ ಬಂದಿತ್ತು. ಅದನ್ನು ಅವರು ಯಶಸ್ವಿಯಾಗಿ ಜಾರಿಗೆ ತಂದರು.

1957-58ರ ವಿದ್ಯಾ ವರ್ಷದಲ್ಲಿ ಪಿ.ಯು.ಸಿ. ಯೋಜನೆಯನ್ನು ಕಾರ್ಯಗತಗೊಳಿಸಿ, ಇಂಟರ್ ಮೀಡಿಯೆಟ್ ಮಟ್ಟದಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದು ಜಯಪ್ರದಗೊಳಿಸಿದರು. ಆ ದರ್ಜೆಗಳಿಗನುಗುಣವಾಗಿ ಪಠ್ಯಪುಸ್ತಕಗಳ ರಚನೆಗೆ ಪ್ರೋತ್ಸಾಹ ನೀಡಿ, ಸಾಕಷ್ಟು ವಿಜ್ಞಾನ ಸಂಬಂಧವಾದ ಗ್ರಂಥಗಳು ಕನ್ನಡದಲ್ಲಿ ಹೊರಬರುವಂತೆ ವ್ಯವಸ್ಥೆ ಮಾಡಿದರು. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಅಧಿಕ ಸಂಖ್ಯೆಯಲ್ಲಿ ತೇರ್ಗಡೆಯಾದರೆಂಬ ವಿಷಯ ಅಂಕಿ ಅಂಶಗಳಿಂದ ಖಚಿತಗೊಂಡಿತು. ಆಗ ಅವರು ತುಂಬ ಹರ್ಷಗೊಂಡರು.

ಕುವೆಂಪು ಅವರು ಪದವಿ ತರಗತಿಗಳಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದರು. ಪಠ್ಯಪುಸ್ತಕ ರಚನೆಯ ಯೋಜನೆಯನ್ನು ಜೊತೆಯಲ್ಲಿಯೇ ಸಿದ್ಧಪಡಿಸಿದರು. ಕೇವಲ ಒಂದು ವರ್ಷದ ಅವಧಿಯಲ್ಲಿ ಸಾಕಷ್ಟು ಪುಸ್ತಕಗಳು ಪ್ರಕಟವಾದವು. ಅವರ ದಿಟ್ಟತನದ ತೀರ್ಮಾನದಿಂದ ಕನ್ನಡ ಮಾಧ್ಯಮ ವಿಶ್ವವಿದ್ಯಾನಿಲಯದ ಬೋಧನೆಯಲ್ಲಿ ಜಾರಿಗೆ ಬಂದಿತು. ಅದರಿಂದ ನಾಡಿನ ಯುವಕರು ವಿದ್ಯಾವಂತ ಪದವೀಧರರಾದರು. ವಿದ್ಯಾಭ್ಯಾಸದ ಎಲ್ಲ ಹಂತದಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿಸಿದ ಕುವೆಂಪು ಕನ್ನಡ ಭಾಗ್ಯೋದಯದ ಕಾರಣಪುರುಷರಾದರು.

ದೂರದೃಷ್ಟಿ ಹೊಂದಿದ ಪ್ರಾಜ್ಞ ಶಿಕ್ಷಣತಜ್ಞ ಕುವೆಂಪು ಅವರು ಮೈಸೂರು ವಿಶ್ವವಿದ್ಯಾನಿಲಯದ ವಿಕಾಸದ ವಿಶಾಲ ನೆಲೆಗೆ ಭದ್ರ ಬುನಾದಿ ಹಾಕಿದರು. ಅವರು ವಿಶ್ವವಿದ್ಯಾನಿಲಯ ಆಯೋಗದ ಅಧ್ಯಕ್ಷ ಸಿ.ಡಿ. ದೇಶಮುಖ್ ಅವರಿಗೆ ತಮ್ಮ ಯೋಜನೆಗಳನ್ನು ತಿಳಿಸಿ ಅವರಿಂದ ಹಣದ ಸಹಾಯ ಪಡೆದರು.

ಅಧ್ಯಾಪಕರ ಕನಿಷ್ಠ ವೇತನ ನೂರರಿಂದ ಇನ್ನೂರಕ್ಕೇರಿಸುವಲ್ಲಿ ಯಶಸ್ವಿಯಾದರು. ರಾಜ್ಯ ಸರ್ಕಾರಕ್ಕೆ ವಿಶ್ವವಿದ್ಯಾನಿಲಯದ ಭವ್ಯದಿವ್ಯ ಬೃಹತ್ ಯೋಜನಾ ಚಿಂತನೆಗಳನ್ನು ತಿಳಿಸಿ ಕಾರ್ಯಗತಗೊಳ್ಳುವಂತೆ ಮಾಡಿದರು.



ಕುವೆಂಪು ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕಾಗಿ ಸರದಾರ್ ಬಸವರಾಜೇ ಅರಸು ಅವರ ಜಯಲಕ್ಷ್ಮೀ ಭವನ ಮತ್ತು ಮುನ್ನೂರು ಎಕರೆ ಭೂಮಿಯನ್ನು 9 ಲಕ್ಷಕ್ಕೆ ಆಯೋಗದ ನೆರವಿನಿಂದ ಕೊಂಡುಕೊಂಡರು. 1959ರ ಮಧ್ಯಭಾಗದಲ್ಲಿ 55ಲಕ್ಷ ರೂಪಾಯಿಯ ಅಂದಾಜಿನಿಂದ ಹೊಸಕಟ್ಟಡಗಳ ಯೋಜನೆ ಸಿದ್ಧಗೊಳಿಸಿ ಆಯೋಗದ ಪೂರ್ಣಸಮ್ಮತಿಯಿಂದ ಕಾರ್ಯಗತಗೊಳಿಸಿದರು. ಗಣಿತ ಭವನ. ಮಾನವಶಾಸ್ತ್ರಶಾಲೆ, ಗ್ರಂಥಾಲಯ, ವಿಜ್ಞಾನದ ಕಟ್ಟಡಗಳು, ವಿದ್ಯಾರ್ಥಿನಿಲಯ ಮತ್ತು ಅಧ್ಯಾಪಕರ ವಸತಿಗೃಹಗಳನ್ನು ಪೂರ್ಣಗೊಳಿಸಿದರು. ಅವರು ವಿಶ್ವವಿದ್ಯಾನಿಲಯದಲ್ಲಿ ಸಂಶೋಧನಾಂಗ, ಬೋಧನಾಂಗಗಳ ಜೊತೆಗೆ ಪ್ರಸಾರಾಂಗವನ್ನು ಬಲಪಡಿಸಿ ನೂರಾರು ಮೌಲಿಕ ಪುಸ್ತಕಗಳ ಪ್ರಕಟಣೆಗೆ ಕಾರಣರಾದರು. ಹೀಗೆ ಮೈಸೂರು ವಿಶ್ವವಿದ್ಯಾನಿಲಯದ ಬೆಳವಣಿಗೆಯನ್ನು ಮಾಡಿದರು.

ಕುವೆಂಪು ಅವರು ಕರ್ನಾಟಕ ಏಕೀಕರಣವಾಗುವವರೆಗೂ ತಾವು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಸ್ವೀಕರಿಸುವುದಿಲ್ಲ ಎಂದು ಪ್ರತಿಜ್ಞೆಮಾಡಿದ್ದರು. 1956ರಲ್ಲಿ ಕರ್ನಾಟಕ ಏಕೀಕರಣವಾಯಿತು. ಅವರು 1957ರಲ್ಲಿ ಧಾರವಾಡದಲ್ಲಿ ನಡೆದ 39ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಆ ಸಮ್ಮೇಳನ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಕುವೆಂಪು ಅವರ ಅಧ್ಯಕ್ಷತೆಯಲ್ಲಿ ನಡೆದುದಾಗಿ ವಿಶೇಷ ಮಾನ್ಯತೆ ಪಡೆಯಿತು. ಅವರು ಮಾಡಿದ 'ಸಂಸ್ಕೃತಿ ಕರ್ನಾಟಕ' ಅಧ್ಯಕ್ಷ ಭಾಷಣ ತುಂಬಾ ಮೌಲಿಕವಾಗಿದೆ.

## ಮಾನಸಗಂಗೋತ್ರಿ

ಮೈಸೂರು ವಿಶ್ವವಿದ್ಯಾನಿಲಯದ ಮಹಾಕ್ಷೇತ್ರಕ್ಕೆ 'ಮಾನಸಗಂಗೋತ್ರಿ' ಎಂದು ಹೆಸರಿಟ್ಟರು. ಅವರ ಪ್ರಕಾರ 'ಮಾನಸಗಂಗೋತ್ರಿ ಎಂಬ ಹೆಸರು ಭೌಗೋಲಿಕವೂ ಹೌದು, ಆಧ್ಯಾತ್ಮಿಕವೂ ಹೌದು.. ಯಾವ ಭಾರತೀಯನಿಗೂ ಗಂಗೆ ಎಂಬ

ಮಾತಾಗಲಿ, ಮಾನಸ ಎಂಬ ಮಾತಾಗಲಿ ಕೇವಲ ಭೌಗೋಲಿಕ ಅಸ್ತಿತ್ವ ಪಡೆದಿರುವ ನಿರ್ಜೀವ ವಸ್ತುಗಳಲ್ಲ. ಅವುಗಳೆಲ್ಲ ಮಾನಸಿಕ ಆಧ್ಯಾತ್ಮಿಕ ಸಾಂಕೇತಿಕಾರ್ಥಗಳ ತವರಾಗಿವೆ. ಮಾನಸ ಎಂಬ ಮಾತು ಮಾನಸ ಸರೋವರದ ಸೂಚಿ ಆಗಿರುವಂತೆಯೆ ಮನಸ್ ಸಂಬಂಧಿಯೂ ಆಗಿದೆ. ಮಾನಸದ ಮಾನಸಿಕ ಶೃಂಗೌನ್ನತ್ಯಗಳಲ್ಲಿ ಅತಿಮಾನಸವು ಅವತರಿಸಿ ಬರುತ್ತದೆ. (28–4–1960ರಂದು ಮಾನಸಗಂಗೋತ್ರಿ ಪ್ರಾರಂಭೋತ್ಸವದಲ್ಲಿ ಆಡಿದ ಉಪಕುಲಪತಿ ನುಡಿಗಳು)

ಆಡಳಿತದಲ್ಲಿ ನಾವೀನ್ಯತೆ, ಕ್ಷಮತೆ, ದಕ್ಷತೆ, ಕ್ರಿಯಾಶೀಲತೆ ತಂದ ಮಹಾಕವಿ, ದಾರ್ಶನಿಕ, ಶಿಕ್ಷಣತಜ್ಞ ಕುವೆಂಪು ಅವರು 3–7–1960 ರಂದು ಉಪಕುಲಪತಿ ಸ್ಥಾನದಿಂದ ನಿವೃತ್ತರಾದರು.

ಅವರ ಕಾಲದಲ್ಲಿ ವಿಶ್ವವಿದ್ಯಾಲಯ ಸ್ವಾಯತ್ತ ಸಂಸ್ಥೆಯಾಯಿತು. ಮೂರು ವರ್ಷ ಪದವಿ ಶಿಕ್ಷಣ, ಎರಡು ವರ್ಷಗಳ ಸ್ನಾತಕೋತ್ತರ ವಿದ್ಯಾಪದ್ಧತಿ ಜಾರಿಗೆ ತಂದರು. ಪದವಿ ತರಗತಿಗಳಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದರು. ಅವರಿಂದ 1959ರಲ್ಲಿ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ 'ಮಾನಸ ಗಂಗೋತ್ರಿ' ಎಂದು ನಾಮಕರಣಗೊಂಡಿತು. ಅವರು ವಿಶ್ವವಿದ್ಯಾನಿಲಯದಲ್ಲಿ ಬೋಧನಾಂಗ, ಸಂಶೋಧನಾಂಗಗಳ ಜೊತೆ ಪ್ರಸಾರಾಂಗವನ್ನು ಬಲಪಡಿಸಿ ನೂರಾರು ಪುಸ್ತಕಗಳ ಪ್ರಕಟಣೆಗೆ ಕಾರಣರಾದರು. ಅವರ ಅವಧಿಯಲ್ಲಿ ಗಣಿತ ಭವನ, ಮಾನವಶಾಸ್ತ್ರ ಶಾಲೆ, ಗ್ರಂಥಾಲಯ, ವಿಜ್ಞಾನ ವಿಭಾಗ ಭವನ, ವಿದ್ಯಾರ್ಥಿ ನಿಲಯ, ಅಧ್ಯಾಪಕರ ವಸತಿ ಗೃಹಗಳು ಕಟ್ಟಲ್ಪಟ್ಟವು.

**ಆಚಾರ್ಯ ವಿನೋಬಾ**

ಭಗವತ್ಕೃಪೆಯೆ ಮೂರ್ತಿ ರೂಪವಾದಂತಿದ್ದ ಭೂದಾನಯೋಗಿ ಆಚಾರ್ಯ ವಿನೋಬಾ ಅವರು ಮೈಸೂರಿನಲ್ಲಿ ಪಾದಯಾತ್ರೆ ಕೈಗೊಂಡಿದ್ದರು. ಆ



ಸಂದರ್ಭದಲ್ಲಿ ಕುವೆಂಪು ಅವರ ಮನೆ 'ಉದಯರವಿ'ಗೆ 25.09.1957ರಂದು ಭೇಟಿ ನೀಡಿದರು. ಅವರಿಗೆ ಜೇನು, ಮೊಸರು ಅರ್ಪಿಸಿದಾಗ ಅವರು 'ಶ್ರೀರಾಮಾಯಣ ದರ್ಶನಂ' ಮೊದಲಾದ ಪುಸ್ತಕಗಳನ್ನು ತೋರಿಸಿ 'ಈ ಪ್ರಸಾದ ಸಾಕು! ಅದು ಏಕೆ?' ಎಂದು ಕನ್ನಡದಲ್ಲಿ ನುಡಿದರು. ಅವರು ಕನ್ನಡ ಓದುತ್ತಿದ್ದರು. ಅವರು ಶ್ರೀರಾಮಾಯಣ ದರ್ಶನಂ ಮಹಾಕಾವ್ಯದ ಹಸ್ತಪ್ರತಿ ತರಿಸಿಕೊಂಡು ಮುಟ್ಟಿನೋಡಿ ಸಂತೋಷಪಟ್ಟರು. ಕುವೆಂಪು ಅವರ ಮಕ್ಕಳು ಕಲಾ, ತಾರಿಣಿಯರು 'ಅಂತರತಮ ನೀಗುರು' 'ನಿನ್ನಡಿದಾವರೆಯಲ್ಲಿ' ಗೀತೆಗಳನ್ನು ಹಾಡಿದರು. ಅವರ ದೇವರಮನೆ ನೋಡಿ 'ಇಲ್ಲಿ ಎಲ್ಲ ಇದ್ದಾರೆ'[1] ಎಂಬರ್ಥದ ಮಾತು ವಿನೋಬಾ ಆಡಿದರು.

### ರಾಷ್ಟ್ರಕವಿ : 'ಚಾರುತ್ವದ ಕುಂದಣದಲ್ಲಿ ಚಾರಿತ್ರ್ಯದ ರತ್ನ'

ಕುವೆಂಪು ಅವರಿಗೆ ಕರ್ನಾಟಕ ಸರ್ಕಾರ 1964ರಲ್ಲಿ 'ರಾಷ್ಟ್ರಕವಿ' ಪ್ರಶಸ್ತಿ ನೀಡಿತು. ಅದೇ ವರ್ಷ ಅವರಿಗೆ 60 ವರ್ಷ ತುಂಬಿತು. ಕುವೆಂಪು ಷಷ್ಟ್ಯಬ್ದಿ ಆಚರಣೆ ಸಮಾರಂಭವನ್ನು ಅದರೊಟ್ಟಿಗೆ ಇಟ್ಟುಕೊಂಡು ಶಿವಮೊಗ್ಗದಲ್ಲಿ ಕುವೆಂಪು ಕಾವ್ಯಾಭಿಮಾನಿಗಳು ಫೆಬ್ರವರಿ 1965ರಲ್ಲಿ ಕಾರ್ಯಕ್ರಮ ನಡೆಸಿದರು. ಮಹಾಕವಿಗಳ ಸನ್ಮಾನ ಕಾರ್ಯಕ್ರಮದ ಅಧ್ಯಕ್ಷತೆಯನ್ನು ವರಕವಿ ದ.ರಾ.ಬೇಂದ್ರೆಯವರು ವಹಿಸಿದ್ದರು. ಅವರು ಆ ಸಭೆಯಲ್ಲಿ ತಾವು ರಚಿಸಿದ 'ಯುಗದ ಕವಿಗೆ' ಕವನ ವಾಚಿಸಿದರು. ಆ ನುಡಿ ಜನಮನದಲ್ಲಿ ಸ್ಥಾಯಿಯಾಗಿ ಕುವೆಂಪು 'ಯುಗದ ಕವಿ'ಯಾದರು

'ಯುಗದ ಕವಿ' ಕವನ ಕುವೆಂಪು ಅವರ 'ಗಂಗೋತ್ರಿ' ಅಭಿನಂದನಾ ಗ್ರಂಥದಲ್ಲಿ ಪ್ರಕಟವಾಗಿದೆ. ಕುವೆಂಪು ಅವರು ರಚಿಸಿದ 'ಶ್ರೀರಾಮಾಯಣ ದರ್ಶನಂ' ಮಹಾಕಾವ್ಯ. 'ಕವಿಗೆ ಕವಿ ಮಣಿವನ್' ಎಂಬುದು ಕನ್ನಡ ಸಾಹಿತ್ಯ

---

1. ವಿವರಗಳಿಗೆ ನೋಡಿ: ಮಗಳು ಕಂಡ ಕುವೆಂಪು ಪು. 42 ರಿಂದ 50





ಸಂಸ್ಕೃತಿ. ತಮ್ಮ ಕಾಲಮಾನದಲ್ಲಿ ವೈಚಾರಿಕ, ವೈಜ್ಞಾನಿಕ ಜಾಗೃತಿ ಮೂಡಿಸುವ ಸಾಹಿತ್ಯ ರಚಿಸಿ ಮನುಜಮತ, ವಿಶ್ವಪಥ ಎಂಬ ಚಿಂತನೆ ನೀಡಿದ ಕವಿ ಕುವೆಂಪು ಕನ್ನಡ ಸಾಹಿತ್ಯದಲ್ಲಿ ಯುಗ ನಿರ್ಮಾಪಕರು. ಅದನ್ನು ಅರಿತ ದ. ರಾ. ಬೇಂದ್ರೆಯವರು 'ಯುಗದ ಕವಿಗೆ, ಜಗದ ಕವಿಗೆ', ಶ್ರೀರಾಮಾಯಣ ದರ್ಶನ'ದಿಂದಲೇ ಕೈಮುಗಿದ ಕವಿಗೆ ಮಣಿದಿದ್ದಾರೆ. ಮಣಿಯದವರು ಆರು? ಎಂದು ಮಣಿದಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸರ ಪರಮಶಿಷ್ಯರಾದ ಕುವೆಂಪು 'ಶ್ರೀ ರಾಮಕೃಷ್ಣ ವಚನವೇದ ನುಡಿನಮನ' ಮತ್ತು 'ಶ್ರೀ ರಾಮಕೃಷ್ಣ ಪರಮಹಂಸ – ಜೀವನಚರಿತ್ರೆ'ಯನು ರಚಿಸಿದ್ದಾರೆ. ಕುವೆಂಪು ಅವರ ರಾಮಕೃಷ್ಣ ವಚನೋದಿತ ಪ್ರತಿಭೆ ಸೃಷ್ಟಿಸಿದ ಕವನ ಸಮೂಹವನ್ನು ಓದಿ ಆನಂದಿಸದವರು ಯಾರು? ಎಂದು ಬೇಂದ್ರೆ ಕೇಳಿದ್ದಾರೆ.

'ಕಾಡಿನ ಕೊಳಲಿದು, ಕಾಡ ಕವಿಯುನಾ' ಎಂದು ತಿಳಿಸಿದ ಮಲೆಯ ಕವಿ ಕುವೆಂಪು ಅವರು ತಮ್ಮ ಎಲ್ಲಾ ಕೃತಿಗಳಲ್ಲಿ ಮಲೆನಾಡಿನ ವೈಭವವನ್ನು ಜನತೆಗೆ ಉಣಿಸಿರುವರು. ಆ ವರ್ಣನಾ ವೈಭವದಲ್ಲಿ ನಲಿದು ಕುಣಿಯದವರು ಯಾರೂ ಇಲ್ಲ ಎಂದು ಅದರ ಧನಾತ್ಮಕ ಭಾವದರಿವನ್ನು ಕಾವ್ಯದಲ್ಲಿ ಬೇಂದ್ರೆ ನೀಡಿದ್ದಾರೆ.

'ಕನ್ನಡಿಸಲಿ ಶಿವ ಜೀವನ
ಮುನ್ನಡಿಸಲಿ ಯುವ ಜನ ಮನ
ಇದೋ ಪ್ರಾರ್ಥನೆ ತಮಗೆ'

ಎಂದು ಬೇಂದ್ರೆ ಹೇಳಿರುವ ನುಡಿ ಕನ್ನಡ ಭಾಷೆ ಸಂಸ್ಕೃತಿಯ ಅತ್ಯುನ್ನತ ನೆಲೆಯ ಸಮಕಾಲೀನ ಕವಿಗಳ ಪರಸ್ಪರ ಗೌರವದ ಉತ್ತುಂಗತೆ.

ಕುವೆಂಪು ಅವರ ನಿವಾಸದ ಹೆಸರು 'ಉದಯ ರವಿ'. ಅಲ್ಲಿಂದ ನಾಡಿಗೆ ಹೊಮ್ಮಿದ ಜಾಗೃತ ಬೆಳಕು ಮೌಢ್ಯ, ಕಂದಾಚಾರ, ಸಾಮಾಜಿಕ ಕಟ್ಟುಪಾಡುಗಳ



ಕತ್ತಲನ್ನು ಒಡೆದೋಡಿಸಿದೆ. ವೈಜ್ಞಾನಿಕ ಮನೋಧರ್ಮವನ್ನು ಮೂಡಿಸಿದೆ. ಆ ಕವಿಯ ನುಡಿ ಚದುರು/ಚಾತುರ್ಯ ಅರಿವನ್ನು ಯುವಜನರಲ್ಲಿ ಮೂಡಿಸುತ್ತದೆ ಎಂಬ ಭಾವದಲ್ಲಿ ಬೇಂದ್ರೆಯವರು ಹೀಗೆ ವರ್ಣಿಸಿದ್ದಾರೆ :

'ತಮವೆಲ್ಲಿದೆ ರವಿ ಇದಿರಿಗೆ
ಉತ್ತಮ ಕವಿ ನುಡಿ ಚದುರಿಗೆ'

ಕುವೆಂಪು ಸುಂದರ ಸುಲಕ್ಷಣ ತೇಜಸ್ವಿ, ಅವರ ವ್ಯಕ್ತಿತ್ವವನ್ನು ರೂಪಿಸಿರುವ ಅವರ ಶುದ್ಧ ಜೀವನ ಶೈಲಿ ನಾಡಿಗೆ ಆದರ್ಶ. ಅಂತಹ ಚಾರಿತ್ರ್ಯ ಅವರದು. ಸೃಷ್ಟಿಕರ್ತ ಭಗವಂತ ಚಿನ್ನದಲ್ಲಿ ಹರಳನ್ನು ಕೂಡಿಸುವ ಕೆಲಸ ಕುಂದಣದ ರೀತಿಯಲ್ಲಿ ಸೃಷ್ಟಿಸಿದ್ದಾನೆ ಎಂದು ಅವರ ಚಾರುತ್ವ, ಚಾರಿತ್ರ್ಯವನ್ನು ಪ್ರತಿಮಾತ್ಮಕವಾಗಿ ಬೇಂದ್ರೆ ಹೀಗೆ ಚಿತ್ರಿಸಿದ್ದಾರೆ.

'ಚಾರುತ್ವದ ಕುಂದಣದಲ್ಲಿ
ಚಾರಿತ್ರ್ಯದ ರತ್ನ'

ಕುವೆಂಪು ಅವರು ಸದಾ ಜನರ ಬದುಕಿಗೆ ಉಪಯುಕ್ತವಾಗುವ ಎಚ್ಚರದ ಜಾಣತನದ ಆಲೋಚನೆ ಮಾಡುತ್ತ ಅಂತಹವರ ಸಹವಾಸದಲ್ಲಿ ಸದಾ ಇದ್ದು ಬಾಳಿದವರು. ಅಂತಹ ವ್ಯಕ್ತಿತ್ವದ ಕುವೆಂಪು ನಮ್ಮ ಸಮಕಾಲೀನರು ಎಂಬುದೇ ನಮಗೆ ತೃಪ್ತಿ ಎಂದು ಬೇಂದ್ರೆ ಸುಖಿಸಿದ್ದಾರೆ : "ಚಾತುರ್ಯದ ಮಂತಣದಲಿ ಸತ್ಸಂಗದ ಯತ್ನ ಇದೇ ತೃಪ್ತಿಯು ನಮಗೆ"[2]

## ಕುಟುಂಬ ವಾತ್ಸಲ್ಯ

ತಂದೆ ಕುವೆಂಪು ಅವರನ್ನು ಮಕ್ಕಳು 'ಅಣ್ಣ' ಎಂದು ಕರೆಯುತ್ತಿದ್ದರು. ಕುವೆಂಪು ಅವರು ತಮ್ಮ ಹೆಣ್ಣು ಮಕ್ಕಳನ್ನು ಸದಾ 'ಅಕ್ಕ' ಎಂದು ಅಕ್ಕರೆಯಿಂದ

2. ಜಿ. ಕೃಷ್ಣಪ್ಪ., ಹಸಿರು ಹಚ್ಚೆ ಚುಚ್ಚೆ., ವಂಶಿ ಪ್ರಕಾಶನ, ನೆಲಮಂಗಲ, 2019, ಪು.ಸಂ 82–84.





ಕರೆಯುತ್ತಿದ್ದರು. ಗಂಡು ಮಕ್ಕಳು ತಪ್ಪು ಮಾಡಿದಾಗ ಬೆತ್ತದಿಂದ ಬಾರಿಸುತ್ತಿದ್ದರು. ಅವರ ಹಿರಿಯ ಮಗಳು ಇಂದುಕಲಾ ಕನ್ನಡ ಎಂ.ಎ. ಪದವೀಧರರು. ಕಿರಿಯ ಮಗಳು ತಾರಿಣಿ ಬಿ.ಎಸ್‌ಸಿ ಮಾಡಿ, ಮ್ಯೂಸಿಕಾಲಜಿಯಲ್ಲಿ ಎಂ.ಎ. ಪದವೀಧರರು. ಅವರು ತಂದೆಯ ಅನೇಕ ಭಾವಗೀತೆಗಳಿಗೆ ಸ್ವರ ಪ್ರಸ್ತಾರ ಹಾಕಿ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅವರಿಬ್ಬರೂ ವೀಣೆ ನುಡಿಸುತ್ತಿದ್ದರು. ಕ್ರೋಷಾ ಕಸೂತಿ ಹಾಕುತ್ತಿದ್ದರು.

ಕುವೆಂಪು ಅವರ ಹಿರಿಯ ಮಗ ಪೂರ್ಣಚಂದ್ರ ತೇಜಸ್ವಿ ಎಂ.ಎ. ಪದವೀಧರರು. ಅವರು ಸ್ವತಂತ್ರ ಪ್ರವೃತ್ತಿಯ ವಿಚಾರಶೀಲ ಸಾಹಿತಿ, ಕಥೆಗಾರರಾಗಿದ್ದರು. ಕಿರಿಯ ಮಗ ಕೋಕಿಲೋದಯ ಚೈತ್ರ ಅವರು ಬಿ.ಇ ಪದವೀಧರರು. ಅವರು ಎಚ್.ಎಂ.ಟಿಯಲ್ಲಿ ಉದ್ಯೋಗಿಯಾಗಿದ್ದರು. ಆ ಫ್ಯಾಕ್ಟರಿಯಿಂದ ಆಸ್ಟ್ರೇಲಿಯಾಕ್ಕೆ ಹೋಗಿ, ಅಂತರ್ಧರ್ಮಿಯ ಹೆಣ್ಣು ಮರ್ಲಿನ್‌ರನ್ನು ಮದುವೆಯಾಗಿ ಅಲ್ಲಿಯೇ ನೆಲಸಿದ್ದಾರೆ.

ಕುವೆಂಪು ಅವರು ರಾತ್ರಿ ಮಲಗುವ ಹೊತ್ತಿನಲ್ಲಿ ಮಕ್ಕಳಿಗೆ ಕುಪ್ಪಳಿಯ ಶಿಕಾರಿ ಅನುಭವಗಳನ್ನು ಕತೆಯಾಗಿ ಹೇಳುತ್ತಿದ್ದರು. ಜೊತೆಗೆ ರಾಮಾಯಣ, ಮಹಾಭಾರತ, ಪಂಚತಂತ್ರ, ಹರಿಶ್ಚಂದ್ರ ಕಥೆ ಹೇಳುತ್ತ ಜೀವನ ನೀತಿ ತಿಳಿಯುವಂತೆ ಮಾಡುತ್ತಿದ್ದರು. ಅವರು ಕಥಾಕಾರರಾಗಿದ್ದರು. ಅವರು ಕೆಲವು ಸಮಯ ಮಕ್ಕಳೊಡನೆ ತಾರಸಿಯ ಮೇಲೆ ಬೆಳದಿಂಗಳ ಊಟ ಮಾಡುತ್ತಿದ್ದರು. ಅವರು ಅಂಗಡಿಯಿಂದ ಸಿಹಿಕೊಳ್ಳುತ್ತಿರಲಿಲ್ಲ. ಏನಿದ್ದರೂ 'ಯಾವಾಗಲಾದರೂ ಮನೆಯಲ್ಲಿ ಸಿಹಿ ತಿಂಡಿಯನ್ನು ಮಾಡುವ ಕ್ರಮವಿಟ್ಟುಕೊಂಡಿದ್ದರು. ಅವರ ಮೌಲಿಕ ಜೀವನ ರೀತಿಯನ್ನು ಮಗ ತೇಜಸ್ವಿ ಹೀಗೆ ತಿಳಿಸಿದ್ದಾರೆ:' ಅಣ್ಣ ಜಿಪುಣರಲ್ಲ. ಆದರೆ ಹಣ ಮಾಡುವ ಕ್ಷಿಪ್ತ ಮಾರ್ಗಗಳಾವುವನ್ನು ಹಿಡಿಯದೆ ಕಷ್ಟಪಟ್ಟು ಸಂಪಾದಿಸಿದರು. ಹಾಗಾಗಿ ಹಣವನ್ನು ಹಗುರವಾಗಿ ಪರಿಗಣಿಸಿ ವೆಚ್ಚ ಮಾಡುವುದು ಅವರಿಂದ ಸಾಧ್ಯವೇ ಇರಲಿಲ್ಲ. ಅವರು ಕ್ಷೌರಮಾಡಿಕೊಳ್ಳುವ



ಬ್ಲೇಡುಗಳ ಕಾಗದದ ಕವರಿನ ಮೇಲೆ ಸಹ ಅದರಲ್ಲಿ ಕ್ಷೌರ ಆರಂಭಿಸಿದ ದಿನಾಂಕ ಬರೆದಿಡುತ್ತಿದ್ದರು. ಹಣದ ಬೆಲೆ, ಕಾಲದ ಬೆಲೆ. ಮನುಷ್ಯನ ಆತ್ಮಗೌರವಕ್ಕೆ ಬೆಲೆ ಇವೆಲ್ಲ ಅಣ್ಣನ ದೃಷ್ಟಿಕೋನದ ವಿವಿಧ ಅಭಿವ್ಯಕ್ತಿಗಳಾಗಿದ್ದವು.[3]

ಈ ಮಾತಿಗೆ ಸಾಕ್ಷಿ ಎಂಬಂತೆ ಕುವೆಂಪು ಅವರ ಸಾಹಿತ್ಯಪೋಷಕ ಉದಾರಗುಣ ಹೀಗಿತ್ತು:

ಕೋ. ಚೆನ್ನಬಸಪ್ಪನವರು ಶ್ರೀ ಅರವಿಂದರ 'ಲೈಫ್ ಡಿವೈನ್' ಇಂಗ್ಲಿಷ್ ಕೃತಿಯನ್ನು 'ದಿವ್ಯ ಜೀವನ' ಎಂದು ಕನ್ನಡಕ್ಕೆ ಅನುವಾದಿಸಿದರು. ಅದರ ಪ್ರಕಟಣೆಗೆ ಆರ್ಥಿಕ ಅಡಚಣೆಯಾಗಿದ್ದನ್ನು ಕುವೆಂಪು ತಿಳಿದರು. ತಕ್ಷಣ ಒಂದು ಸಾವಿರದ ಒಂದು ನೂರು ರೂಪಾಯಿಗಳ ಧನಸಹಾಯ ಮಾಡಿದರು.[4]

ತೇಜಸ್ವಿಯವರು ಮಿಡಲ್‌ಸ್ಕೂಲಿನಲ್ಲಿ ಓದುತ್ತಿದ್ದಾಗ ತನಗೆ ಅರ್ಥವಾಗದ ಅವರ ಕವನಗಳ ಬಗ್ಗೆ ಹಾಗೂ ಇತರ ವಿಚಾರವಾಗಿ ವಿವರಿಸಲು ಕೇಳಿಕೊಳ್ಳುತ್ತಾರೆ. ಆ ಸಂದರ್ಭವನ್ನು ನೆನೆದುಕೊಳ್ಳುತ್ತಾ ತೇಜಸ್ವಿ "ಅಣ್ಣ ನನ್ನೊಡನೆ ಚರ್ಚಿಸಿರುವ ಅನೇಕ ವಿಚಾರಗಳಲ್ಲಿ ನನಗೆ ಅವರು 'ಕೂಸಿನ ಕನಸು' ಕವನವನ್ನು ಓದಿ ವಿವರಿಸಿದ್ದು ಹಾಗೂ ಬೇಂದ್ರೆಯವರ 'ಸಾಯೋ ಆಟ' ನಾಟಕವನ್ನು ಅಷ್ಟು ಜನ ಮಕ್ಕಳನ್ನೂ ಕೂರಿಸಿಕೊಂಡು ಅಭಿನಯ ಪೂರ್ವಕವಾಗಿ ವಾಚನಮಾಡಿದ್ದು ಜ್ಞಾಪಕಕ್ಕೆ ಬರುತ್ತದೆ"[3(1)] ಎಂದು ತಿಳಿಸಿದ್ದಾರೆ. ಅದು ಕುವೆಂಪು ಅವರು ಮುಕ್ತ ಮನಸ್ಸಿನಿಂದ ಮಕ್ಕಳೊಡನೆ ಚರ್ಚಿಸುವ, ತನ್ನ ಸಮಕಾಲೀನ ಕವಿ ಬೇಂದ್ರೆ ಅವರ ನಾಟಕವನ್ನು ತನ್ನ ಮಕ್ಕಳಿಗೆ ತಿಳಿಸಿ ಹೇಳುವ ಆದರ್ಶ ನಡೆಯನ್ನು ಪರಿಚಯಿಸುತ್ತದೆ.

---

3. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಅಣ್ಣನ ನೆನಪು, ಪುಸ್ತಕ ಪ್ರಕಾಶನ, ಮೈಸೂರು. 2007., ಪು.90.
   3(1). ಅದೇ ಪುಟ -47
4. ಕೋ. ಚೆನ್ನಬಸಪ್ಪ, ಶ್ರೀ ಅರವಿಂದರ ದಿವ್ಯ ಜೀವನ, ಅರವಿಂದ ಪ್ರಕಾಶನ, 1981, ಪು. x




ಕುವೆಂಪು ಅವರು ತಮ್ಮ ಮಕ್ಕಳಿಗೆ ಇದು ಓದಬೇಕು. ಇಂತಹ ವಿಷಯವೇ ಆರಿಸಿಕೊಳ್ಳಿ ಮುಂತಾಗಿ ಏನು ಹೇಳುತ್ತಿರಲಿಲ್ಲ. ಯಾವ ವಿಷಯ ಓದಿದರೂ, ಚೆನ್ನಾಗಿ ವಿಷಯ ಗ್ರಹಿಸುವ ಕಡೆ ಗಮನ ಕೊಡಿ ಎಂದು ಹೇಳುತ್ತಿದ್ದರು. ಅವರು ಸಮಯಪಾಲನೆಯನ್ನು ವ್ರತದಂತೆ ಆಚರಿಸುತ್ತಿದ್ದರು. ಅದು ಮಕ್ಕಳಿಗೆ ಮಾರ್ಗದರ್ಶಿ ನಡೆಯಾಗಿತ್ತು.

ಅವರಿಗೆ ಮತ್ತು ಅವರ ಶ್ರೀಮತಿಯವರಿಗೆ ಪ್ರಾಣಿಗಳ ಮೇಲೆ ಬಹಳ ಪ್ರೀತಿ. ಅವರು ಜರ್ಸಿ ಜಾತಿಯ ದನಗಳು, ಮುರಾ ಜಾತಿಯ ಎಮ್ಮೆಗಳನ್ನು ಸಾಕಿದ್ದರು. ಅವರ ಶ್ರೀಮತಿಯವರು ಹಾಲು ಕರೆದು ಚೆನ್ನಾಗಿ ಆರೈಕೆ ಮಾಡುತ್ತಿದ್ದರು. ಅವರು ಅಸಿಸ್ಟೆಂಟ್ ಪ್ರೊಫೆಸರ್ ಆದ ಮೇಲೆ ಹೊಸ ಪ್ರಿಫೆಕ್ಟ್ ಪೋರ್ಡ್ ಕಾರು ಕೊಂಡುಕೊಂಡಿದ್ದರು. ಅದನ್ನು ಡ್ರೈವ್ ಮಾಡುತ್ತ ಮಕ್ಕಳನ್ನು ಬಲಮುರಿ, ರಂಗನತಿಟ್ಟು, ಇಲ್ವಾಲ, ಚಾಮುಂಡಿಬೆಟ್ಟಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಉಪಕುಲಪತಿಗಳಾಗಿದ್ದಾಗ 'ಸ್ಟುಡಿ ಬೇಕರ್ ಕಮ್ಯಾಂಡರ್' ದೊಡ್ಡ ಕಾರು ಕೊಂಡರು. ಕುವೆಂಪು ಅವರ ವ್ಯಕ್ತಿತ್ವವನ್ನು ಮಗಳು ತಾರಿಣಿ ಹೀಗೆ ಚಿತ್ರಿಸಿದ್ದಾರೆ:

ತಂದೆಯವರದು ಶಾಂತ ಸ್ವಭಾವ, ಗಂಭೀರ ವ್ಯಕ್ತಿತ್ವ, ಮಿತಭಾಷಿಯಾದ ಅವರು ತೂಗಿ ತೂಗಿ ಆಡುವ ಮಾತಿನಲ್ಲಿ ಅನುಭವದ ಸಾರವಿತ್ತು. ಅವರು ತುಂಬಾ ವಿಚಾರಪರರೂ ವೈಜ್ಞಾನಿಕ ಚಿಂತಕರೂ ಆಗಿದ್ದರು. ಮೌಢ್ಯ-ವಂಚನೆ-ರಾಹುಕಾಲ-ಗುಳಿಕಕಾಲ ಇಂತಹವುಗಳನ್ನು ಕಂಡಾಗ ಖಂಡಾತುಂಡವಾಗಿ ಖಂಡಿಸುತ್ತಿದ್ದರು.[5]

---

5. ತಾರಿಣಿ ಚಿದಾನಂದ, ಮಗಳು ಕಂಡ ಕುವೆಂಪು, ಪುಸ್ತಕ ಪ್ರಕಾಶನ, ಮೈಸೂರು. 2015, ಪು. 272



## ಉದಯರವಿ ಉದ್ಯಾನ

ಕುವೆಂಪು ಅವರ ಮನೆ ಉದಯರವಿ ಉದ್ಯಾನದಲ್ಲಿ ತೆಂಗು, ಬಾದಾಮಿ, ನೆಲ್ಲಿ, ಸೀಬೆ, ಬೆಟ್ಟದ ನೆಲ್ಲಿ, ಬಾಳೆ, ಸಪೋಟ, ಹಿಪ್ಪನೇರಳೆ, ಸುರಹೊನ್ನೆ, ಪನ್ನೇರಳೆ, ಅಂಜೂರ, ಮಾವು, ಹಲಸು, ನುಗ್ಗೆ, ಸಂಪಿಗೆ, ಚಕ್ಕೋತ, ನಿಂಬೆ, ರಾಂಫಲ, ಸೀತಾಫಲ ಮರಗಿಡಗಳಿದ್ದವು. ಆ ಉದ್ಯಾನದಲ್ಲಿ ವಿವಿಧ ಬಣ್ಣದ ಡಾಲಿಯ ಹೂ, ಜರ್ಬರಾ, ವಿವಿಧ ಬಗೆಯ ಗುಲಾಬಿ, ಕಾಲಿಕ ಹೂ (Season flower), ಆಸ್ಟರ್, ಪ್ಲಾಕ್ಸ್, ಚೆಂಡು ಹೂ, ಕಾರೋನೇಷನ್, ಜಿನಿಯಾ, ಸಾಲ್ವಿಯಾ, ಬೊಗನ್‌ವಿಲ್ಲಾ, ಮ್ಯಾಗ್ನೋಲಿಯಾ ಗ್ರಾಂಡಿಪ್ಲೋರಾ ಹೂಗಿಡಗಳಿದ್ದವು. ಅಲ್ಲಿ ಟುವ್ವಿ ಹಕ್ಕಿಗಳು, ಚೊಟ್ಟಿ ಮೈನ, ಪಿಕಳಾರ, ಚುಕ್ಕಿ ಗುಬ್ಬಚ್ಚಿ, ಮರಕುಟಕ, ಸಾದಾ ಗುಬ್ಬಚ್ಚಿ, ಹೊರಸಲು ಹಕ್ಕಿ, ಹೂವಿನ ಹಕ್ಕಿ, ಉಳಿ ಹಕ್ಕಿ, ಅರಿಶಿನ ಬುರುಡೆ ಹಕ್ಕಿಗಳು ಹಣ್ಣನ್ನು ತಿನ್ನುತ್ತ, ಗೂಡು ಕಟ್ಟುತ್ತ ಮರಿಗಳೊಡನೆ ಸಂತಸದಿಂದಿದ್ದವು.

ಆ ಉದ್ಯಾನದ ಸೊಬಗನ್ನು ನೋಡುತ್ತ, ಹಕ್ಕಿಗಳ ಇಂಚರ ಆಲಿಸುತ್ತ ಅವರು ನಿವೃತ್ತ ಜೀವನವನ್ನು ಆನಂದಮಯವಾಗಿ ಕಳೆದರು. 'ಹೂವಿನ ತೋಟದಲ್ಲಿ ಪುಷ್ಪಸಮಾಧಿ!' 'ಪುಷ್ಪ ಭಗವಾನ್', 'ಉದ್ಯಾನದಲ್ಲಿ ಧ್ಯಾನಯೋಗಿ', 'ಸೌಂದರ್ಯಯಾಜಿ', 'ಪವಾಡ ಸಂದರ್ಶನ' ಮುಂತಾದ ಕವನಗಳನ್ನು ಬರೆದರು.[6]

## ದೇವರ ಮನೆ

ಕುವೆಂಪು ಅವರ ದೇವರ ಮನೆಯಲ್ಲಿ ಶ್ರೀ ಸ್ವಾಮಿ ಶಿವಾನಂದ, ಶ್ರೀ ರಾಮಕೃಷ್ಣ, ಶ್ರೀ ಶಾರದಾದೇವಿ, ಸ್ವಾಮಿ ವಿವೇಕಾನಂದ, ತಂದೆ ವೆಂಕಟಪ್ಪಗೌಡ, ಸ್ವಾಮಿ ಸಿದ್ಧೇಶ್ವರಾನಂದ, ಅರವಿಂದ, ದುರ್ಗೆಯ

---

6. ವಿವರಗಳಿಗೆ ನೋಡಿ: ತಾರಿಣಿ ಚಿದಾನಂದ, ಮಗಳು ಕಂಡ ಕುವೆಂಪು, ಪುಸ್ತಕ ಪ್ರಕಾಶನ, ಮೈಸೂರು 2015, 272

ಫೋಟೋಗಳಿದ್ದವು. ಪ್ಲಾಸ್ಟರ್ ಆಫ್ ಪ್ಯಾರೀಸ್‌ನಲ್ಲಿ ಮಾಡಿದ ಬುದ್ಧನ ಮುಖ, ವೆಂಕಟರಮಣನ ಸಣ್ಣ ಲೋಹದ ವಿಗ್ರಹ, ರಾಮ ಸೀತೆ ಲಕ್ಷ್ಮಣ ಆಂಜನೇಯ, ಕೃಷ್ಣ, ಗೌರಿ ಗಣೇಶ ವಿಗ್ರಹಗಳಿದ್ದವು.

ಕುವೆಂಪು ಅವರ ಶ್ರೀಮತಿ ಮತ್ತು ಹೆಣ್ಣುಮಕ್ಕಳು ದೇವರ ಮನೆಯನ್ನು ಸದಾ ಶುಚಿಯಾಗಿಟ್ಟು, ಹೂಗಳಿಂದ ಅಲಂಕರಿಸುತ್ತಿದ್ದರು. ಕುವೆಂಪು ಪ್ರತಿದಿನ ದೇವರಮನೆಯಲ್ಲಿ ಕುಳಿತು ಪೂಜೆ ಪ್ರಾರ್ಥನೆ ಮಾಡಿ ಧ್ಯಾನದಲ್ಲಿರುತ್ತಿದ್ದರು. ಪೂಜೆ ಮುಗಿದ ಮೇಲೆ ಪ್ರಪಂಚದ ಶಾಂತಿಗಾಗಿ ಪ್ರಾರ್ಥನೆ ಮಾಡಿ ಎಲ್ಲ ದೇವರ ಹೆಸರು ಹೇಳುತ್ತ ಜಾಗಟೆ ಹೊಡೆಯುತ್ತಿದ್ದರು. ಅದನ್ನು ನೆನೆಯುತ್ತ ಸೊಸೆ ರಾಜೇಶ್ವರಿ 'ನಮಗೆಲ್ಲ ಮಕ್ಕಳು ಮತ್ತು ಮೊಮ್ಮಕ್ಕಳಿಗೆ ಅಣ್ಣ ಮತ್ತು ಉದಯರವಿಯ ದೇವರಮನೆ ನೆನಪಾಗುವುದೇ ಅವರ ಪ್ರಾರ್ಥನೆಯ ಧ್ವನಿಯಿಂದ ನಮ್ಮ ಹೃದಯದಲ್ಲಿ ಮಾರ್ದನಿಸುತ್ತಿತ್ತು'[7] ಎಂದು ತಿಳಿಸಿದ್ದಾರೆ.

## ನಿವೃತ್ತ ಜೀವನ

ಕುವೆಂಪು ಅವರಿಗೆ ಐವತ್ತೈದನೆಯ ವಯಸ್ಸಿಗೆ ನಿವೃತ್ತಿಯಾಯಿತು. ಅನಂತರ ಅವರು 'ಮಲೆಗಳಲ್ಲಿ ಮದುಮಗಳು' ಮಹಾ ಕಾದಂಬರಿ (1967) ಮತ್ತು 'ನೆನಪಿನ ದೋಣಿಯಲ್ಲಿ' ಆತ್ಮಕಥೆ (1985) ಬರೆದರು. ಅವರು ಪ್ರತಿದಿನ ಬೆಳಗ್ಗೆ ಸಂಜೆ ಗಂಗೋತ್ರಿಯವರೆಗೆ ವಾಕಿಂಗ್ ಹೋಗಿ ಬರುತ್ತಿದ್ದರು. ಅವರು ಮೌನವಾಗಿ ನಿರ್ಮಲ ಚಿತ್ತದಿಂದ ಶಾಂತ ಜೀವನ ನಡೆಸುತ್ತಿದ್ದರು. ಅವರು 'ಪ್ರಾತಃಸಂಚಾರ ನನಗೆ ವ್ಯಾಯಾಮ ಮಾತ್ರವಾಗಿರದೆ ಸೌಂದರ್ಯ ಯಾತ್ರೆಯೂ ಆಗುತ್ತದೆ. ಆನಂದ, ಆಶ್ಚರ್ಯ ವೈಚಿತ್ರ್ಯಗಳಿಂದ ಆಧ್ಯಾತ್ಮಿಕ ಸಾಧನೆಯೂ ಆಗುತ್ತದೆ.' ಎಂದು ಹೇಳುತ್ತಿದ್ದರು. ಇತರರಿಗೂ ಅದನ್ನು ಪಡೆಯುವಂತೆ ಪ್ರೇರೇಪಿಸುತ್ತಿದ್ದರು.[8]

---

7. ರಾಜೇಶ್ವರಿ ತೇಜಸ್ವಿ, ನನ್ನ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು, 2021, ಪ–201.

8. ತಾರಿಣಿ ಚಿದಾನಂದಗೌಡ, ಪೂರ್ವೋಕ್ತ, ಪು.435



## ಮಂತ್ರ ಮಾಂಗಲ್ಯ

ಕುವೆಂಪು ಅವರು ತಮ್ಮ ಹಿರಿಯ ಮಗ ಪೂರ್ಣಚಂದ್ರ ತೇಜಸ್ವಿಯ ವಿವಾಹವನ್ನು ಮಂತ್ರ ಮಾಂಗಲ್ಯದ ರೀತಿಯಲ್ಲಿ ನವಂಬರ್ 1966ರಲ್ಲಿ ನಡೆಸಿದರು. ತೇಜಸ್ವಿಯು ವಧು ರಾಜೇಶ್ವರಿಗೆ, ಅಮ್ಮ ಮಾಡಿಸಿಕೊಟ್ಟ ತಾಳಿ ಕಟ್ಟಿದರು ಮತ್ತು ಪಚ್ಚೆಯ ಉಂಗುರ ತೊಡಿಸಿದರು. ಮದುವೆಯಲ್ಲಿ ಹಾಜರಿದ್ದವರು 36 ಮಂದಿ. ಆ ವಿವಾಹವನ್ನು ಕುರಿತು ರಾಜೇಶ್ವರಿ ಹೀಗೆ ಹೇಳಿದ್ದಾರೆ. "ಸನಾತನ ಸಾಂಪ್ರದಾಯಿಕ ಮದುವೆ ಪದ್ಧತಿಗೆ ಮುಖಾಮುಖಿಯಾಗಿ ಜಾತಿವಾದಿಗಳಿಗೆ ಧಿಕ್ಕಾರ ಹಾಕಿ ಅಂತರ್ಜಾತಿ ಸರಳ ವಿವಾಹ ಕುವೆಂಪುರವರ ಪೌರೋಹಿತ್ಯದಲ್ಲಿ ಮೊಟ್ಟ ಮೊದಲಿಗೆ ನಮ್ಮ ಮದುವೆ ನಡೆದಾಗ ಇದು ಜಾತಿ ವಿನಾಶದ ಅಂದೋಳನಕ್ಕೆ ನಾಂದಿಯಾಯಿತು".[9] 'ಮಂತ್ರಮಾಂಗಲ್ಯ' ವಿವಾಹದ ಮೂಲಕ ಅವರು ಸರಳ ವಿವಾಹ ಪದ್ಧತಿಯನ್ನು ಜಾರಿಗೆ ತಂದರು. ಅದರಲ್ಲಿ ವರದಕ್ಷಿಣೆ, ವಧುದಕ್ಷಿಣೆ ಇರಕೂಡದು. "ಮಂತ್ರ ಮಾಂಗಲ್ಯ ವಿವಾಹವು ಗುರುಹಿರಿಯರ ಮತ್ತು ಬಂಧು ಬಾಂಧವರ ಸಮ್ಮುಖದಲ್ಲಿ ನಡೆಯುವ ಪವಿತ್ರ ವಿಧಿಯಾದುದರಿಂದ ಎರಡೂ ಕಡೆಯಿಂದ ಒಟ್ಟು ಇನ್ನೂರು ಜನರನ್ನು ಮೀರದಂತೆ ಆಹ್ವಾನಿಸಬೇಕು. ಮಂತ್ರ ಮಾಂಗಲ್ಯದ ಮದುವೆಯಲ್ಲಿ ಉಡುಗೊರೆಗಳು ನಿಷಿದ್ಧ. ಜಾತಿ ಪದ್ಧತಿ, ಸ್ತ್ರೀ ಅಸಮಾನತೆ, ಅಸ್ಪೃಶ್ಯತೆ ಮೊದಲಾದ ಅನಿಷ್ಟಗಳಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಗಿರುವ ಈ ಶಾಸ್ತ್ರಾಚಾರಗಳಿಂದ ಭಾರತೀಯರನ್ನು ವಿಮುಕ್ತಗೊಳಿಸುವುದೇ ಮಂತ್ರ ಮಾಂಗಲ್ಯದ ಮೂಲ ಉದ್ದೇಶ. ಇಲ್ಲಿ ಯಾವ ವೃತ್ತಿ ಪುರೋಹಿತನಿಗೂ ಪ್ರವೇಶವಿಲ್ಲ. ಓದು ಬರಹ ಕಲಿತ, ಈ ಮಂತ್ರಗಳನ್ನು ಓದಿ ಅರ್ಥ ಮಾಡಿಕೊಳ್ಳಬಲ್ಲ ವಧೂವರರ ತಂದೆ ತಾಯಿಗಳಾಗಲೀ ಗುರುಹಿರಿಯರಾಗಲೀ

---

9. ರಾಜೇಶ್ವರಿ ತೇಜಸ್ವಿ, ನನ್ನ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು, 2021, ಪು–218

ಯಾರಾದರೊಬ್ಬರು ಮಂತ್ರ ಮಾಂಗಲ್ಯದ ಮಂತ್ರಗಳನ್ನೂ, ವಿವಾಹ ಸಂಹಿತೆಯನ್ನೂ ವಧುವರರಿಗೆ ಬೋಧಿಸಬಹುದು. ಅಲ್ಲದೆ ಯಾರು ಯಾವುದೇ ವಿಧಾನದಲ್ಲಿ ಮದುವೆಯಾದರೂ ಅದನ್ನು ರಿಜಿಸ್ಟರ್ ಮಾಡಿಸಬೇಕಾದುದು ಕಡ್ಡಾಯ ಮಾಡಬೇಕೆನ್ನುವುದು ನಮ್ಮ ಧೋರಣೆ."[10]

**ವಿಶ್ವಮಾನವ, ವಿಶ್ವ ಸಂಸ್ಕೃತಿ**

ಕುವೆಂಪು ಅವರು 1957ರಲ್ಲಿ ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದರು. ಅವರು ಮಾಡಿದ 'ಸಂಸ್ಕೃತಿ ಕರ್ನಾಟಕ' ಅಧ್ಯಕ್ಷ ಭಾಷಣ ತುಂಬ ಮೌಲಿಕವಾಗಿದೆ.

ಮೈಸೂರು ವಿಶ್ವವಿದ್ಯಾಲಯದವರು ನವಂಬರ್ 1959ರಲ್ಲಿ ಮಡಿಕೇರಿಯಲ್ಲಿ ಪ್ರಚಾರೋಪನ್ಯಾಸ ಕಾರ್ಯಕ್ರಮ ನಡೆಸಿದರು. ಅದನ್ನು ಉದ್ಘಾಟಿಸಿದ ಉಪ-ಕುಲಪತಿ ಕುವೆಂಪು ಅವರು 'ವಿಶ್ವಮಾನವ' ಕುರಿತು ಉಪನ್ಯಾಸ ಮಾಡಿದರು. ಅದರಲ್ಲಿ ವಿಶ್ವವಿದ್ಯೆ, ವಿಶ್ವ ಪ್ರಜ್ಞೆ, ವಿಶ್ವ ಮೈತ್ರಿ, ವಿಶ್ವಮಾನವತೆ ಕುರಿತು ವಿವರವಾಗಿ ತಿಳಿಸಿದರು. ಅದು ಅವರ ವಿಶ್ವಮಾನವ ಸಂದೇಶದ ಮನುಜಮತ, ವಿಶ್ವಪಥವನ್ನು ತಿಳಿಯಲು ಸಹಾಯವಾಗುತ್ತದೆ.

ಅವರು "ನನ್ನದು ವಿಶ್ವಸಂಸ್ಕೃತಿ. ಅಭಾರತೀಯವೂ ಅದರಲ್ಲಿ ಸೇರಿದೆ. ಸನಾತನವೂ (ಪುರಾತನ ಅಲ್ಲ) ಶಾಶ್ವತವೂ ಆಧ್ಯಾತ್ಮಿಕವೂ ವಿಚಾರ ಮತ್ತು ವಿಜ್ಞಾನಗಳಿಗೆ ಅವಿರುದ್ಧವೂ ಆಗಿರುವ ಸತ್ಯ ಎಲ್ಲಿಯೆ ಇರಲಿ ಅದನ್ನು ನಾನು ಸ್ವೀಕರಿಸಿದ್ದೇನೆ"[11] ಎಂದು ಹೇಳಿದ್ದಾರೆ.

---

10. ಕುವೆಂಪು ಸಮಗ್ರ ಗದ್ಯ ಸಂಪುಟ 2. ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ, 2013, ಪು 1211 ರಿಂದ 1231.

11. ಸಮಗ್ರ ಗದ್ಯ ಸಂಪುಟ 2, ಪು 530



**ವಿಶ್ವಮಾನವ ಗೀತೆ : ಅನಿಕೇತನ**

ಓ ನನ್ನ ಚೇತನ
ಆಗು ನೀ ಅನಿಕೇತನ!

ರೂಪ ರೂಪಗಳನು ದಾಟಿ
ನಾಮ ಕೋಟಿಗಳನು ಮೀಟಿ
ಎದೆಯ ಬಿರಿಯೆ ಭಾವದೀಟಿ,
ಓ ನನ್ನ ಚೇತನ
ಆಗು ನೀ ಅನಿಕೇತನ!

ನೂರು ಮತದ ಹೊಟ್ಟ ತೂರಿ
ಎಲ್ಲ ತತ್ತ್ವದೆಲ್ಲೆ ಮೀರಿ,
ನಿರ್ದಿಗಂತವಾಗಿ ಏರಿ,
ಓ ನನ್ನ ಚೇತನ
ಆಗು ನೀ ಅನಿಕೇತನ!

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;
ಓ ಅನಂತವಾಗಿರು!
ಓ ನನ್ನ ಚೇತನ
ಆಗು ನೀ ಅನಿಕೇತನ!

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ;
ಅನಂತ ನೀ ಅನಂತವಾಗು;
ಆಗು, ಆಗು, ಆಗು, ಆಗು
ಓ ನನ್ನ ಚೇತನ
ಆಗು ನೀ ಅನಿಕೇತನ!

ಬೆಂಗಳೂರು ವಿಶ್ವವಿದ್ಯಾಲಯದ ಹತ್ತನೆಯ ಘಟಿಕೋತ್ಸವ ಡಿಸೆಂಬರ್ 1974 ರಂದು ನಡೆಯಿತು. ಅವರ ಆ ಘಟಿಕೋತ್ಸವ ಭಾಷಣ 'ವಿಚಾರ ಕ್ರಾಂತಿಗೆ ಆಹ್ವಾನ' ವಿಷಯದಿಂದ ಕೂಡಿತ್ತು.

ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟವು ಮೈಸೂರಿನ ಮಹಾರಾಜ ಕಾಲೇಜಿನ ಶತಮಾನೋತ್ಸವ ಭವನದಲ್ಲಿ ಏಪ್ರಿಲ್ 1974ರಲ್ಲಿ ನಡೆಯಿತು. ಕುವೆಂಪು ಅವರು ಅದನ್ನು ಉದ್ಘಾಟಿಸಿ ಮಾಡಿದ ಭಾಷಣ 'ಸಂಸ್ಕೃತಿ ಕ್ರಾಂತಿಗೆ ಕಹಳೆನಾಂದಿ!' ಅದು ಅವರು ಕರ್ನಾಟಕದ ಜನರ ಬದುಕು ಉತ್ತಮವಾಗಲು ಊದಿದ ಕ್ರಾಂತಿಕಹಳೆ.

## ಜ್ಞಾನಪೀಠ ಪ್ರಶಸ್ತಿ

1958ರಲ್ಲಿ ಕೇಂದ್ರ ಸರ್ಕಾರ ಅವರಿಗೆ 'ಪದ್ಮಭೂಷಣ' ಪ್ರಶಸ್ತಿ ನೀಡಿತು. 1964ರಲ್ಲಿ ರಾಜ್ಯಸರ್ಕಾರ 'ರಾಷ್ಟ್ರಕವಿ' ಪ್ರಶಸ್ತಿ ನೀಡಿತು. 1968ರಲ್ಲಿ 'ಶ್ರೀರಾಮಾಯಣ ದರ್ಶನಂ' ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿತು. 1979ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಫೆಲೋಶಿಪ್ ದೊರಕಿತು. 1988ರಲ್ಲಿ 'ಪದ್ಮವಿಭೂಷಣ', 'ಪಂಪ ಪ್ರಶಸ್ತಿ' ಪಡೆದರು. 1992ರಲ್ಲಿ ರಾಜ್ಯಸರ್ಕಾರ 'ಕರ್ನಾಟಕ ರತ್ನ' ಪ್ರಶಸ್ತಿ ನೀಡಿತು.

ಕುವೆಂಪು ಅವರು ತುಂಬು ಬಾಳನ್ನು ಬಾಳಿ ತಾ 10-11-1994ರಂದು ಅನಂತ ಶಕ್ತನಲ್ಲಿ ಲೀನವಾದರು. ಅವರ ಅಂತ್ಯಕ್ರಿಯೆ ಕುಪ್ಪಳಿಯ 'ಕವಿಶೈಲ'ದಲ್ಲಿ ನಡೆಯಿತು. ಕುಪ್ಪಳಿಯಲ್ಲಿ ಕುವೆಂಪು ಅವರ ಮೂಲ ವಾಸಸ್ಥಾನವು 'ಕವಿಮನೆ'ಯಾಗಿ, ಕವಿ ಸಮಾಧಿ ಸ್ಥಳವು 'ಕವಿಶೈಲ'ವಾಗಿ ವಿಶ್ವದ ಎಲ್ಲ ಸಾಹಿತ್ಯಾಸಕ್ತರ ಪವಿತ್ರ ಯಾತ್ರಾ ನೆಲೆಯಾಗಿದೆ. ಕರ್ನಾಟಕ ಸರ್ಕಾರವು ಕವಿಯ ಜನ್ಮದಿನ (29 ಡಿಸೆಂಬರ್) ವನ್ನು 'ವಿಶ್ವಮಾನವ' ದಿನವಾಗಿ ಘೋಷಿಸಿದೆ. ಕರ್ನಾಟಕ ಸರ್ಕಾರವು ಕುವೆಂಪು ಅವರ ಕುಪ್ಪಳಿ ಮನೆಯ ಸುತ್ತಲಿನ ಹಡಗಿನಮಕ್ಕಿ ಮನ್ನಾ ಅರಣ್ಯವನ್ನು ಕವಿಶೈಲವನ್ನೊಳಗೊಂಡು 'ಕುವೆಂಪು ಜೈವಿಕ ಧಾಮ ಅರಣ್ಯ' (ಬಯೋ ರಿಜರ್ವ್) ಎಂದು ಘೋಷಿಸಿದೆ. ಅದರಿಂದ ಸಹ್ಯಾದ್ರಿ ಸೌಂದರ್ಯ ವಿಕಾಸಗೊಂಡು ನಳನಳಿಸುತ್ತಿದೆ.



## ಪರಾಮರ್ಶನ ಗ್ರಂಥಗಳು


1. ಕುವೆಂಪು, ನೆನಪಿನ ದೋಣಿಯಲ್ಲಿ (ಆತ್ಮಕತೆ), ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ(ರಿ), ಕುಪ್ಪಳ್ಳಿ, 2013.
2. ಕುವೆಂಪು ಸಮಗ್ರ ಗದ್ಯ ಸಂಪುಟ 2, ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ (ರಿ), ಕುಪ್ಪಳಿ, 2013
3. ದೇಜಗೌ., ರಾಷ್ಟ್ರಕವಿ ಕುವೆಂಪು., ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು 1985
4. ಪ್ರಭುಶಂಕರ, ಕುವೆಂಪು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1995
5. ಕೋ. ಚೆನ್ನಬಸಪ್ಪ, ಶ್ರೀ ಅರವಿಂದರ ದಿವ್ಯ ಜೀವನ, ಶ್ರೀ ಅರವಿಂದ ಪ್ರಕಾಶನ, ಬೆಂಗಳೂರು, 1981. 2007
6. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಅಣ್ಣನ ನೆನಪು, ಪುಸ್ತಕ ಪ್ರಕಾಶನ, ಮೈಸೂರು. 2007
7. ತಾರಿಣಿ ಚಿದಾನಂದ, ಮಗಳು ಕಂಡ ಕುವೆಂಪು., ಪುಸ್ತಕ ಪ್ರಕಾಶನ, ಮೈಸೂರು.. 2015
8. ರಾಜೇಶ್ವರಿ ತೇಜಸ್ವಿ, ನನ್ನ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು, 2021
9. ಜಿ. ಕೃಷ್ಣಪ್ಪ, ಹಸಿರು ಹಚ್ಚಿ ಚುಚ್ಚಿ, ವಂಶಿ ಪ್ರಕಾಶನ.. ನೆಲಮಂಗಲ, 2019

## ಅನುಬಂಧ - ೧

## ಕುವೆಂಪು ಅವರ ಕೃತಿಗಳು

| ೧. | ಕಾವ್ಯ | ಪ್ರಥಮ ಮುದ್ರಣ |
|---|---|---|
| ೧. | Beginner's Muse | ೧೯೨೨ |
| ೨. | ಅಮಲನ ಕಥೆ | ೧೯೨೪ |
| ೩. | ಹಾಳೂರು | ೧೯೨೬ |
| ೪. | ಬೊಮ್ಮನಹಳ್ಳಿಯ ಕಿಂದರಿಜೋಗಿ | ೧೯೨೮ |
| ೫. | ಕೊಳಲು | ೧೯೩೦ |
| ೬. | ಪಾಂಚಜನ್ಯ | ೧೯೩೩ |
| ೭. | ನವಿಲು | ೧೯೩೪ |
| ೮. | ಕಲಾಸುಂದರಿ | ೧೯೩೪ |
| ೯. | ಕಥನ ಕವನಗಳು | ೧೯೩೬ |
| ೧೦. | ಚಿತ್ರಾಂಗದಾ - ಖಂಡಕಾವ್ಯ | ೧೯೩೬ |
| ೧೧. | ಕೋಗಿಲೆ ಮತ್ತು ಸೋವಿಯತ್ ರಷ್ಯಾ | ೧೯೪೪ |
| ೧೨. | ಕೃತ್ತಿಕೆ | ೧೯೪೬ |
| ೧೩. | ಪಕ್ಷಿಕಾಶಿ | ೧೯೪೬ |
| ೧೪. | ಪ್ರೇಮಕಾಶ್ಮೀರ | ೧೯೪೬ |
| ೧೫. | ಅಗ್ನಿಹಂಸ | ೧೯೪೬ |
| ೧೬. | ಕಿಂಕಿಣಿ | ೧೯೪೬ |
| ೧೭. | ಶಿಶುಗೀತಾಂಜಲಿ | ೧೯೪೬ |
| ೧೮. | ಷೋಡಶಿ | ೧೯೪೭ |





೨. ನಾಟಕಗಳು



೩. ಕಥೆಗಳು

**೮. ಮುನ್ನುಡಿ, ಪತ್ರಗಳು, ಕಿರುಪುಸ್ತಿಕೆ**

೧. ಮುನ್ನುಡಿ ತೋರಣ ೧೯೮೯

೨. ಕುವೆಂಪು ಪತ್ರಗಳು ೧೯೭೪

೩. ಶ್ರೀ ರಾಮಕೃಷ್ಣ ವಚನವೇದ ನುಡಿನಮನ ೧೯೯೩

**೯. ಜೀವನ ಚರಿತ್ರೆ**

೧. ಸ್ವಾಮಿ ವಿವೇಕಾನಂದ ೧೯೩೨

೨. ಶ್ರೀ ರಾಮಕೃಷ್ಣ ಪರಮಹಂಸ ೧೯೩೪

**೧೦. ಆತ್ಮಕಥೆ**

೧. ನೆನಪಿನ ದೋಣಿಯಲ್ಲಿ ಭಾಗ–೧ ೧೯೮೦

೨. ನೆನಪಿನ ದೋಣಿಯಲ್ಲಿ ಭಾಗ–೨ ೧೯೮೫

**೧೧. ಭಾಷಾಂತರ**

೧. ವಿವೇಕವಾಣಿ ೧೯೩೩

೨. ವೇದಾಂತ ೧೯೩೪

೩. ಜನಪ್ರಿಯ ವಾಲ್ಮೀಕಿ ರಾಮಾಯಣ ೧೯೫೦

೪. ಗುರುವಿನೊಡನೆ ಭಾಗ–೧

ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು ೧೯೫೪

ಗುರುವಿನೊಡನೆ ಭಾಗ–೨

ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು ೧೯೬೮

**೧೨. ಸಂಪಾದನೆ**

ಕರ್ನಾಟಕ ಭಾರತ ಕಥಾಮಂಜರಿ (ಮಾಸ್ತಿಯವರೊಂದಿಗೆ ಸಹ ಸಂಪಾದಿತ ಕೃತಿ) ೧೯೫೮



## ಅನುಬಂಧ – ೨

## ಕುವೆಂಪು ಅವರ ಜೀವನದ ಪ್ರಮುಖ ಘಟ್ಟಗಳು

| | |
|---|---|
| ೨೯-೧೨-೧೯೦೪ | ಜನನ. ಶಾಲಿವಾಹನ ಶಕ ೧೮೨೪ ನೆಯ ಪ್ಲವನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೧೪ನೆಯ ಶುಕ್ರವಾರ. ತಾಯಿಯ ತವರು ಮನೆ ಹಿರೆಕೊಡಿಗೆಯಲ್ಲಿ.<br>ತಂದೆ: ವೆಂಕಟಪ್ಪಗೌಡ, ತಾಯಿ: ಸೀತಮ್ಮ |
| ೧೯೧೬ | ಕುಪ್ಪಳಿ ಮನೆಯಲ್ಲೆ ಖಾಸಗಿ ಮೇಷ್ಟರ ಮೂಲಕ ಪ್ರಾರಂಭಿಕ ವಿದ್ಯಾಭ್ಯಾಸ, ತಂದೆಯ ಮರಣ. |
| ೧೯೧೬ ರಿಂದ ೧೯೧೯ | ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ವಿದ್ಯಾಭ್ಯಾಸ. |
| ೧೯೨೦ | ಇಂಗ್ಲಿಷ್ ಲೊವರ್ ಸೆಕೆಂಡರಿಯಲ್ಲಿ ಉತ್ತೀರ್ಣ. |
| ೧೯೨೦ ರಿಂದ | ಮೈಸೂರಿನಲ್ಲಿ ವಿದ್ಯಾಭ್ಯಾಸ: ವೆಸ್ಲಿಯನ್ ಮಿಷನ್ ಹೈಸ್ಕೂಲು, ಮಹಾರಾಜ ಕಾಲೇಜು. |
| ೧೯೨೨ | ಬಿಗಿನರ್ಸ್ ಮ್ಯೂಸ್ ಪ್ರಕಟಣೆ. |
| ೧೯೨೪ | ತಾಯಿಯ ಮರಣ. |
| ೧೯೨೬ | ಸ್ವಾಮಿ ಸಿದ್ದೇಶ್ವರಾನಂದರ ಕೃಪೆಯಿಂದ ಶ್ರೀ ರಾಮಕೃಷ್ಣಾಶ್ರಮವನ್ನು ಸೇರಿದ್ದು. |
| ೧೯೨೭ | ಬಿ.ಎ. ಪದವಿ. |
| ೧೯೨೮ | ಬೆಂಗಳೂರಿನಲ್ಲಿ ನಡೆದ ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷ. |
| ೧೯೨೯ | ಬೇಲೂರು ಮಠದಲ್ಲಿ ಸ್ವಾಮಿ ಶಿವಾನಂದರಿಂದ ದೀಕ್ಷೆ, ಎಂ.ಎ.ನಲ್ಲಿ ಉತ್ತೀರ್ಣ. ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿದ್ದು. |

| | |
|---|---|
| ೧೯೩೦ | 'ಕೊಳಲು' ಕವನ ಸಂಕಲನದ ಪ್ರಕಟಣೆ |
| ೧೯೩೩ | ಹುಬ್ಬಳ್ಳಿಯಲ್ಲಿ ನಡೆದ ೧೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಕವಿಗೋಷ್ಠಿ'ಯ ಅಧ್ಯಕ್ಷ. |
| ೧೯೩೬ | 'ಕಾನೂರು ಹೆಗ್ಗಡತಿ' ಕಾದಂಬರಿ, 'ಚಿತ್ರಾಂಗದಾ' ಖಂಡಕಾವ್ಯ ಪ್ರಕಟಣೆ. |
| ೧೯೩೭ | ವಿವಾಹ : ಶ್ರೀಮತಿ ಹೇಮಾವತಿ ಅವರೊಡನೆ. ಸ್ವಂತಮನೆ 'ಉದಯರವಿ'ಯಲ್ಲಿ ನೆಲೆಸಿದ್ದು. |
| ೧೯೩೮ | ಮೊದಲನೆಯ ಮಗ ಪೂರ್ಣಚಂದ್ರ ತೇಜಸ್ವಿ ಹುಟ್ಟಿದ್ದು. |
| ೧೯೩೯ | ಕನ್ನಡ ರೀಡರ್ ಆಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ನೇಮಕ |
| ೧೯೪೧ | ಎರಡನೆಯ ಮಗ ಕೋಕಿಲೋದಯ ಚೈತ್ರ ಹುಟ್ಟಿದ್ದು. |
| ೧೯೪೩ | ಮೊದಲನೆಯ ಮಗಳು ಇಂದುಕಲಾ ಹುಟ್ಟಿದ್ದು. |
| ೧೯೪೫ | ಎರಡನೆಯ ಮಗಳು ತಾರಿಣಿ ಹುಟ್ಟಿದ್ದು. |
| ೧೯೪೬ | ಕನ್ನಡ ಪ್ರಾಧ್ಯಾಪಕರು ಮತ್ತು ಕನ್ನಡ ವಿಭಾಗ ಮುಖ್ಯಸ್ಥರಾಗಿ ಮಹಾರಾಜ ಕಾಲೇಜು ಮೈಸೂರಿನಲ್ಲಿ ನೇಮಕ |
| ೧೯೪೯ | 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಮೊದಲ ಸಂಪುಟ ಪ್ರಕಟಣೆ. |
| ೧೯೫೧ | 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಎರಡನೆಯ ಸಂಪುಟ ಪ್ರಕಟಣೆ |
| ೧೯೫೫ | ಮಹಾರಾಜ ಕಾಲೇಜು ಪ್ರಿನ್ಸಿಪಾಲರು. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ. |



| | |
|---|---|
| ೧೯೫೬ | ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್. ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ. ೩೮ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷ. |
| ೧೯೫೭ | ಧಾರವಾಡದಲ್ಲಿ ನಡೆದ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ. |
| ೧೯೫೮ | 'ಪದ್ಮಭೂಷಣ' ಪ್ರಶಸ್ತಿ. |
| ೧೯೬೦ | ಉಪಕುಲಪತಿ ಹುದ್ದೆಯಿಂದ ನಿವೃತ್ತ |
| ೧೯೬೪ | ರಾಜ್ಯ ಸರ್ಕಾರದಿಂದ 'ರಾಷ್ಟ್ರಕವಿ' ಪ್ರಶಸ್ತಿ |
| ೧೯೬೬ | ಕರ್ನಾಟಕ ವಿಶ್ವವಿದ್ಯಾಲಯದಿಂದ ಗೌರವ ಡಿ.ಲಿಟ್. |
| ೧೯೬೭ | 'ಮಲೆಗಳಲ್ಲಿ ಮದುಮಗಳು' ಕಾದಂಬರಿ ಪ್ರಕಟಣೆ |
| ೧೯೬೮ | 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯಕ್ಕೆ ಜ್ಞಾನಪೀಠ ಪ್ರಶಸ್ತಿ. (ಕನ್ನಡದ ಮೊದಲ ಜ್ಞಾನಪೀಠ ಪ್ರಶಸ್ತಿ ) |
| ೧೯೬೯ | ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಿ.ಲಿಟ್. |
| ೧೯೭೯ | ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ |
| ೧೯೮೭ | ಪತ್ನಿ ಶ್ರೀಮತಿ ಹೇಮಾವತಿ ಅವರ ನಿಧನ |
| ೧೯೯೨ | 'ಕರ್ನಾಟಕ ರತ್ನ' ಪ್ರಶಸ್ತಿ |
| ೧೯೯೪ | ನಿಧನ : ೧೦-೧೧-೧೯೯೪. |

**ಕೃಪೆ : ರಾಷ್ಟ್ರಕವಿ ಕುವೆಂಪು ಪ್ರತಿಷ್ಠಾನ ರಿ. ಕುಪ್ಪಳಿ.,**
**ಕುವೆಂಪು ಸಮಗ್ರ ಕಾವ್ಯ ಸಂಪುಟ ೨.**





## ಲೇಖಕರ ಕೃತಿಗಳು

1. ಹಾಡುಹಕ್ಕಿ ಅಂಬಿಕಾತನಯದತ್ತ (1995)
   (ಮೂರನೇ ಆವೃತ್ತಿ – 2012)
2. ಡಿ.ಆರ್.ಬೇಂದ್ರೆ (1997)
   (ಮೈಸೂರು ವಿಶ್ವವಿದ್ಯಾಲಯವು ಪ್ರಕಟಿಸಿರುವ ಆಂಗ್ಲ ಕೃತಿ)
3. ನಾಕುತಂತಿ – ಒಂದು ಟಿಪ್ಪಣಿ (2000)
   (ಐದನೇ ಆವೃತ್ತಿ – 2024)
4. ರಸ್ತೆ ನಿಯಮಗಳು (2000)
   (ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿರುವ ಕೃತಿ)
   ಆರನೇ ಆವೃತ್ತಿ– 2020.
5. ಹೂತೞದ ಹುಣಸಿ (2000) (ದ.ರಾ.ಬೇಂದ್ರೆ ಕಾವ್ಯ ವಿಮರ್ಶೆ)
   (ಎರಡನೇ ಆವೃತ್ತಿ – 2011)
6. ಬೇಂದ್ರೆಯವರ ಸಾಹಿತ್ಯದಲ್ಲಿ ಸ್ತ್ರೀ – ಒಂದು ಅಧ್ಯಯನ (2001)
   (ಪಿ.ಎಚ್.ಡಿ. ಮಹಾಪ್ರಬಂಧ) ಎರಡನೇ ಆವೃತ್ತಿ 2012
7. ಬರೆಹದಲ್ಲಿ ಬೇಂದ್ರೆಯವರ ಬದುಕು (2008)
   (ದ.ರಾ.ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ಧಾರವಾಡ ಪ್ರಕಟಿಸಿರುವ ಕೃತಿ)
   ಎರಡನೇ ಆವೃತ್ತಿ – 2022
8. ಅಂತರಂಗದತ್ತ ನಯನ (2010)
9. ಮಹಾಕವಿ ಲಕ್ಷ್ಮೀಶನ ವಚನ ಜೈಮಿನಿ ಭಾರತ (2012)
10. ಹರಿಹರ ಮಹಾಕವಿಯ ವಚನ ಗಿರಿಜಾ ಕಲ್ಯಾಣ (2013)



11. ಬೇಂದ್ರೆಯವರ ಸಾಹಿತ್ಯದಲ್ಲಿ ಶರಣ ಚಿಂತನೆ (2015)
12. ತಿರುತಿರುಗಿಯು ಹೊಸತಾಗಿರಿ (2015)
    (ದ.ರಾ. ಬೇಂದ್ರೆಯವರ ನಾದಲೀಲೆಯ ಅಧ್ಯಯನ)
13. ರಾಘವಾಂಕ ಮಹಾಕವಿಯ ವಚನ ಹರಿಶ್ಚಂದ್ರ ಚಾರಿತ್ರ (2016)
14. ಸಂತಕವಿ ಕನಕದಾಸರ ನಳದಮಯಂತಿ ಪ್ರೇಮಕಥೆ (2018)
15. ಬೇಂದ್ರೆಕಾವ್ಯ (2018)
    (ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ)
16. ಬೇಂದ್ರೆಕಾವ್ಯ : ಪದನಿರುಕ್ತ (2018)
17. ಹಸಿರು ಹಚ್ಚಿ ಚುಚ್ಚಿ (2019)
18. ಕುವೆಂಪು ಹನುಮದ್ದರ್ಶನ (2020)
19. ಶ್ರೀರಾಮಾಯಣ ದರ್ಶನಂ ಪಾತ್ರಗಳ ಕಥಾವಳಿ (2021)
20. ಕುವೆಂಪು ಶ್ರೀರಾಮಾಯಣದರ್ಶನಂ ವಚನದೀಪಿಕೆ (2021)
21. ಅಂಬಿಕಾತನಯದತ್ತರ ಕನ್ನಡ ಮೇಘದೂತ : ಒಂದು ಸಹಪಯಣ (2021)
    (ಡಾ.ಟಿ.ಎನ್. ವಾಸುದೇವ ಮೂರ್ತಿ ಅವರ ಜೊತೆಗೂಡಿ)
22. ಕರ್ಣಚೈತ್ರನ ಪರ್ಣಶಾಲೆ (2022)
    (ಕುವೆಂಪು ಶ್ರೀರಾಮಾಯಣದರ್ಶನಂ ಮಹಾಕಾವ್ಯ ವಿಮರ್ಶೆ)
23. ಕುವೆಂಪು ಚಿತ್ರಾಂಗದಾ (2022)

* * *





# ಕನ್ನಡ ಜನಶಕ್ತಿ ಕೇಂದ್ರ

## ಕಾರ್ಯಕಾರಿ ಸಮಿತಿ

| | |
|---|---|
| ಪಿ. ಮಲ್ಲಿಕಾರ್ಜುನಪ್ಪ | : ಗೌರವ ಸಲಹೆಗಾರರು |
| ಸಿ.ಕೆ. ರಾಮೇಗೌಡ | : ಅಧ್ಯಕ್ಷರು |
| ನಂ. ವಿಜಯಕುಮಾರ್, ಶಂಕರ್ ಹೂಗಾರ | : ಉಪಾಧ್ಯಕ್ಷರು |
| ಸಿ. ಪುಟ್ಟರಾಜು | : ಪ್ರಧಾನ ಕಾರ್ಯದರ್ಶಿ |
| ಎಂ.ಎಲ್. ರಾಮಕೃಷ್ಣ | : ಖಜಾಂಚಿ |
| ರಾಮಕೃಷ್ಣ, ಆರ್. ಕೋದಂಡರಾಮು | : ಕಾರ್ಯದರ್ಶಿಗಳು |
| ವಿನಯ್ ರಾಮೇಗೌಡ, ಎಚ್. ಪರಮೇಶ್ವರ | : ಸಂಘಟನಾ ಕಾರ್ಯದರ್ಶಿಗಳು |
| ಎಂ.ಜಿ. ದಯಾನಂದ ಕಟ್ಟೆ | : ಪ್ರಧಾನ ಸಂಚಾಲಕರು |
| ಸಿ.ಕೆ. ದಾಸಪ್ಪ, ಕೆ. ತಿಮ್ಮೇಗೌಡ | : ಸಂಚಾಲಕರು |
| ಕೆ. ರಾಮು, ಎಲ್. ಶಿವಕುಮಾರ್ | : ಸಮಿತಿ ನಿರ್ದೇಶಕರು |
| ಇಂದಿರಾ ಶರಣ ಜಮ್ಮಲದಿನ್ನಿ | : ಸಮಿತಿ ನಿರ್ದೇಶಕರು |
| ಶಾಂತಲಾ ಸುರೇಶ್ | : ಸಮಿತಿ ನಿರ್ದೇಶಕರು |



ಜಿ. ಕೃಷ್ಣಪ್ಪನವರು 'ನೆನಪಿನ ದೋಣಿಯಲ್ಲಿ' ಮತ್ತು ಸಮಗ್ರ ಸಾಹಿತ್ಯ ರಾಶಿಯನ್ನು ಶೋಧಿಸಿ, ಅವುಗಳಲ್ಲಿ ಮಕ್ಕಳ ಮನಸ್ಸಿಗೆ ಹಿಡಿಸುವಂತೆ ಯಾವ್ಯಾವುದನ್ನು ಎಷ್ಟೆಷ್ಟು ಪ್ರಮಾಣದಲ್ಲಿ ಕೊಡಬೇಕೆನ್ನುವುದನ್ನು ಸಮತೂಕದಲ್ಲಿರುವಂತೆ ನಿರ್ಣಯಿಸಿ ಕೃತಿಯೊಂದರ ಚೌಕಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಕುವೆಂಪುವನ್ನು ಅವರ ಸಾಹಿತ್ಯದ ಮಹತ್ವವನ್ನು ಕವಿತೆ, ಕಥೆ, ಪ್ರಬಂಧ, ನಾಟಕಗಳ ಓದಿನ ಮೂಲಕ ಮೇಲ್ಪದರದಲ್ಲಿ ಗ್ರಹಿಸಿರುವ ಮಕ್ಕಳು ಕೃಷ್ಣಪ್ಪನವರ ಈ ಕೃತಿಯನ್ನು ಮನಸ್ಸಿಟ್ಟು ಓದಿದರೆ ತಂದೆತಾಯಿ ಶಿಕ್ಷಕರು ಓದುವಂತೆ ಮಾಡಿದರೆ ಕುವೆಂಪು ಎಲ್ಲೋ ದೂರದಲ್ಲಿರುವ ಹತ್ತಿಪ್ಪತ್ತರ ಗುಂಪಿನಲ್ಲಿ ಒಬ್ಬರಾಗಿರುವ ಸಾಹಿತಿ ಎನ್ನುವ ಸಾಮಾನ್ಯ ಕಲ್ಪನೆ ಅಳಿದು ಅವರು ನಮ್ಮವರೇ ಎನ್ನುವ ಪ್ರೀತಿಯೂ ಗೌರವವೂ ಆಪ್ತತೆಯೂ ಬೆಳೆಯುತ್ತದೆ; ಕುವೆಂಪು ಸಾಹಿತ್ಯರಾಶಿಗೆ ಪ್ರೀತಿಯಿಂದ ಕುತೂಹಲದಿಂದ ಪ್ರವೇಶಿಸುವ ಪ್ರೇರಣೆ ದೊರೆಯುತ್ತದೆ; ಪುಟ್ಟ ಮನಸ್ಸುಗಳಿಗೆ ಅವರಿಗೆ ಅರಿವಿಲ್ಲದಂತೆಯೇ ವಿಶ್ವಮಾನವ ಸಂದೇಶ ರವಾನೆಯಾಗುತ್ತದೆ. ಅವರ ನಡೆನುಡಿಗಳಲ್ಲಿ ಮಾರ್ಪಾಟಾಗುತ್ತದೆ. ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಲು ಬೇಕಾದ ಶಕ್ತಿ ಅವರ ತನುಮನಗಳಲ್ಲಿ ಪ್ರವಹಿಸುತ್ತದೆ. 'ನಮ್ಮ ಕುವೆಂಪು' ಎನ್ನುವ ಹೆಸರಿನಲ್ಲಿ ಇಂಥದೊಂದು ವಿಶಿಷ್ಟವೂ ಮೌಲಿಕವೂ ಆದ ಕೃತಿಯನ್ನು ಕನ್ನಡದ ಮಕ್ಕಳಿಗೆ ಕಾಣಿಕೆಯಾಗಿ ನೀಡಿರುವುದಕ್ಕಾಗಿ ನಾಡೋಜ ಕೃಷ್ಣಪ್ಪನವರನ್ನು ಅಭಿನಂದಿಸುತ್ತೇನೆ.

– ಡಾ. ಬೈರಮಂಗಲ ರಾಮೇಗೌಡ



ಕನ್ನಡ ಜನಶಕ್ತಿ ಕೇಂದ್ರ, ಬೆಂಗಳೂರು